

# ಗೋಟೂರ್ (ಬಿ) ಹತ್ಯಾಕಾಂಡ

(ಕ.ರಾ.ಶಿ.ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ ಎಂ.ಫಿಲ್.ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)


ಸಂಶೋಧಕರು

ಬಸವರಾಜ [redacted]

ಸಂಶೋಧನ ಮಾರ್ಗದರ್ಶಕರು

ಡಾ. ಎಚ್.ಎಮ್. ಚಂದ್ರಶೇಖರ ಶಾಸ್ತ್ರಿ

ಸ್ನಾತಕೋತ್ತರ ಸಂಶೋಧನಾ

ಅಧ್ಯಾಯನ ಕೇಂದ್ರ ಕ.ರಾ.ಶಿ. ಸಂಸ್ಥೆ

ಬೀದರ







ಶ್ವವಿದ್ಯಾಲಯ ಹಂಪಿ ವಿದ್ಯಾರಣ್ಯ-೫೮೩೨೭೬

ಸೆಪ್ಟೆಂಬರ-೨೦೦೯





# ಗೋರ್ಟಾ (ಬಿ) ಹತ್ಯಾಕಾಂಡ

(ಕ.ರಾ.ಶಿ.ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ ಎಂ.ಫಿಲ್.ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)



ಸಂಶೋಧಕರು

**ಬಸವರಾಜ ಮಲ್ಲಪ್ಪಾ**

ಸಂಶೋಧನ ಮಾರ್ಗದರ್ಶಕರು

**ಡಾ. ಎಚ್.ಎಮ್. ಚಂದ್ರಶೇಖರ ಶಾಸ್ತ್ರಿ**

**ಸ್ನಾತಕೋತ್ತರ ಸಂಶೋಧನಾ**

**ಅಧ್ಯಾಯನ ಕೇಂದ್ರ ಕ.ರಾ.ಶಿ. ಸಂಸ್ಥೆ**

**ಬೀದರ**



ಕನ್ನಡ ವಿಶ್ವವಿದ್ಯಾಲಯ ಹಂಪಿ ವಿದ್ಯಾರಣ್ಯ–೫೮೩೨೭೬

ಸೆಪ್ಟೆಂಬರ–೨೦೦೯

# ಪ್ರಮಾಣ ಪತ್ರ

ಶ್ರೀ ಬಸವರಾಜ ಮಲ್ಲಪ್ಪಾ ಇವರು ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗದಲ್ಲಿ ಸಂಶೋಧನೆ ಕೈಗೊಂಡು "ಗೋರ್ಟಾ ಹತ್ಯಾಕಾಂಡ" ಎಂಬ ಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ ಇದು ಇವರ ಮೂಲ ಪ್ರಬಂಧವಾಗಿದ್ದು ಈ ಮೊದಲು ಇಡಿಯಾಗಿ ಇಲ್ಲವೆ ಬಿಡಿಯಾಗಿ ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣಿಕರಿಸಲಾಗಿದೆ.

ದಿನಾಂಕ: 26.9.09
ಸ್ಥಳ: ಬೀದರ

ಡಾ. ಎಚ್.ಎಮ್. ಚಂದ್ರಶೇಖರ ಶಾಸ್ತ್ರಿ ಬಸವಾ
ದಿಪ್ಲೋಮಾ ಇನ್ ಎಫಿಗ್ರಾಫಿ, ಡಿಪ್ಲೋಮಾ ಇನ್ ಸ್ಟಡಿ
ಮಾರ್ಗದರ್ಶಕರು
ಸ್ನಾತಕೋತ್ತರ ಸಂಶೋಧನಾ
ಅಧ್ಯಾಯನ ಕೇಂದ್ರ ಕ.ರಾ.ಶಿ. ಸಂಸ್ಥೆ ಬೀದರ

# ಘೋಷಣಾ ಪತ್ರ

"ಗೋರ್ಟಾ ಹತ್ಯಾಕಾಂಡ" ಎಂಬ ಪ್ರಬಂಧವನ್ನು ನಾನು ಡಾ॥ ಎಚ್.ಎಮ್.ಚಂದ್ರಶೇಖರ ಶಾಸ್ತ್ರಿ ಇವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದು, ಇದನ್ನು ಇಡಿಯಾಗಿ ಇಲ್ಲವೆ ಬಿಡಿಯಾಗಿ ಎಲ್ಲಿಯೂ ಪ್ರಕಟಿಸಿಲ್ಲವೆಂದು ಪ್ರಮಾಣಿಕರಿಸುತ್ತಾ, ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್.ಪದವಿಗಾಗಿ ಈ ಪ್ರಬಂಧವನ್ನು ಸಾದರುಪಡಿಸಿದ್ದೇನೆ

ದಿನಾಂಕ: 26.9.09

ಸ್ಥಳ : ಬೀದರ

ಶ್ರೀ ಬಸವರಾಜ ಮಲ್ಲಪ್ಪಾ
ಎಂ.ಎ.ಬಿ.ಇಡಿ.
ಸಂಶೋಧನಾ ಅಧ್ಯಯನ ಕೇಂದ್ರ ಕ.ರಾ.ಶಿ.ಸಂಸ್ಥೆ
ಬೀದರ

# ಪರಿವಿಡಿ

## **ಅಧ್ಯಾಯ.1**
### **ಪೀಠಿಕೆ**

ಜಗತ್ತಿನಲ್ಲಿ ಭಾರತವು ಅಖಂಡತ್ವವನ್ನು ಹೊಂದಿದ ರಾಷ್ಟ್ರ. ಇದು ಪ್ರಪಂಚದಲ್ಲಿರುವ ಅನೇಕ ಸಂಸ್ಕೃತಿಗಳನ್ನು ಮೀರಿವಂತಹ ಹಾಗೂ ಸುಂದರ ಸಂಸ್ಕೃತಿಯನ್ನು ಹೊಂದಿದ ದೇಶವಾಗಿದೆ. ಅನೇಕ ಮಹಾನ್ ಮೇಧಾವಿಗಳಿಗೆ ಜನ್ಮಕೊಟ್ಟ ಈ ಭಾರತ ನಾಡು ಎಷ್ಟೋ ರಾಜಮನತೆಗಳನ್ನು ಕಂಡಿದಿಯೋ, ಅದನ್ನು ಅರಿಯುವದು ಕಷ್ಟ ಸಾಧ್ಯವಾಗಿದೆ. ಸ್ಥಳಿಯ ರಾಜಮನೆತನಗಳನ್ನು ಕಂಡಂತೆ ಹೊರ ರಾಷ್ಟ್ರದವರ ಆಳ್ವಿಕೆಗೆ ಒಳಪಟ್ಟು ರಕ್ತದ ಹೊಳೆ ಹರಿಯಲು ಇವೆಲ್ಲವನ್ನು ಮರೆಯಲೆಂಬಂತೆ ತನ್ನ ಒಡಲಲ್ಲಿ ಅನೇಕ ಸುಂದರ ಗುಣಗಳನ್ನು ಹೊಂದಿದೆ.

ಸುಂದರ ಪರಿಸರ ಹಿಮಗಿರಿಗಳು ನದಿ–ಸರೋವರಗಳು, ಬೆಟ್ಟಗುಡ್ಡಗಳು, ಪ್ರಾಣಿ–ಪಕ್ಷಿಗಳು, ಸ್ವರ್ಗದ ಛಾಯೆ, ಹರಡಿದಂತಿದೆ,ಇತಹ ದೇಶ ಹುಟ್ಟಿದಂದಿನಿಂದಲೂ ಅನೇಕ ರಾಜಕೀಯ ತಿರುವುಗಳನ್ನು ಕಂಡು ಕೊನೆಗೆ ಬ್ರಿಟಿಷರ ಆಳ್ವಕೆಯಲ್ಲಿ ತತ್ತರಿಸಿ 15.08.1947ರಂದು ಅವರ ಬಲಿಷ್ಠ ಅಧಿಕಾರಶಾಹಿ ಸಂಕೋಲೆಗಳಿಂದ ಮುಕ್ತಿ ಕಂಡಿತು.

"ಅಂದು ಭಾರತದ ಬಾನಿನಲ್ಲಿ ಸ್ವಾತಂತ್ರ್ಯ
ಸೂರ್ಯನು ಉದಯಿಸಿದ ಸುದಿನ
ಭಾರತೀಯರ ಹೆಮ್ಮೆಯ ಗೆಲುವಿನ
ನಲುವಿನ ಸಾಕಾರಕ್ಕೆ ಸಮೃದ್ಧ ಫಲ ನೀಡುವ
ಅಮೃತ ಗಳಿಗೆಯನ್ನು ಇತಿಹಾಸದ
ಪುಟ ಪುಟಗಳಲ್ಲಿ ಸುವರ್ಣಾಕ್ಷರಗಳಿಂದ
ಬರೆದಿಡುವ ನೆನಪಿನ ಪವಿತ್ರ ದಿನ"

ಬ್ರಿಟಿಷರು ಭಾರತ ಭೂಮಿಗೆ ವ್ಯಾಪಾರ ಮಾಡುವ ಪ್ರಥಮ ಗುರಿಯನ್ನು ಇಟ್ಟು ಕೊಂಡು **ರಾಣಿ ಎಲಿಜೆಬತ್‌ಳಿಂದ** ಒಪ್ಪಿಗೆ ಪಡೆದುಕೊಂಡು ಭಾರತಕ್ಕೆ ಬಂದು ಹಲವಾರು ವರ್ಷಗಳ ಕಾಲ ವ್ಯಪಾರವನ್ನು ಮಾಡುತ್ತಾ ದೇಶ ಸಂಪತ್ತಿನ ವ್ಯಾಮೋಹಕ್ಕೆ ಬಲಿಯಾಗಿ ಭಾರತಿಯರ ಅರಸರ ನಿರಂತರ ಘರ್ಷಣೆಗಳ ಉಪಯೋಗವನ್ನು ಪಡೆದುಕೊಂಡು ಪ್ರಬಲರಾದರು ಮುಂದೆ ಇಂತಹ ದೇಶ ದ್ರೋಹಿಗಳ ವಿರುದ್ಧ 1857ರಲ್ಲಿ ಪ್ರಥಮ ಬಾರಿಗೆ ಸ್ವತಂತ್ರ್ಯಕ್ಕಾಗಿ ಹೋರಾಟಕ್ಕಿಳಿದರು. ಆದರೆ ಬ್ರಿಟಿಷರ ಭೇದ ನೀತಿಯಿಂದ ಅದು ತಣ್ಣಗಾಯಿತು.ಆದರ ಭಾರತೀಯರ ಮನಸ್ಸಿನಲ್ಲಿ ಬೆಳೆದ

ರಾಷ್ಟ್ರೀಯತೆಗೆ ಕೊನೆಯಿರಲಿಲ್ಲ ನಿರಂತರವಾಗಿ ಭಾರತಾಂಬೆಯ ಮಕ್ಕಳು ಬ್ರೀಟಿಷರಿಂದ ಮುಕ್ತಿಗಾಗಿ ಹವಣಿಸುತ್ತಿದ್ದರು ದೇಶದ್ಯಾಂತ ನಡೆಯುವ ಪ್ರತಿಯೊಂದು ಚಳುವಳಿಗೆ ಜನರ ಬೆಂಬಲ ಅಪಾರವಾಗಿ ದೊರಕಿತು ಇದಕ್ಕೆ ಬೀದರ ಜಿಲ್ಲೆಯ ಬಸವಕಲ್ಯಾಣ ತಾಲುಕಿನ ಸಣ್ಣ ಗ್ರಾಮವಾದ ಗೋರ್ಟಾ(ಬಿ) ಹೊರತಾಗಿರಲಿಲ್ಲ ಭಾರತದ ಇತರ ಕಡೆ ರಾಷ್ಟ್ರೀಯವಾದಿಗಳು ಕೇವಲ ಬ್ರೀಟಿಷರ ವಿರುದ್ದ ಹೋರಾಡಿದರೆ ಹೈದ್ರಾಬಾದ ಸಂಸ್ಥಾನದ ಅಡಿ ಜನತೆ ಪ್ರಮುಖವಾಗಿ ಎರಡು ಕಂಟಕಗಳ ಜೊತೆ ಹೋರಾಡ ಬೇಕಾಗಿತ್ತು. ಒಂದು ಬ್ರೀಟಿಷರಿಂದ ಭಾರತಾಂಬೆಯ ಮುಕ್ತಿಗಾಗಿ ಇನ್ನೊಂದು ಹೈದ್ರಾಬಾದ ಕರ್ನಾಟಕವನ್ನು ನಿಜಾಂನಿಂದ ಮುಕ್ತಿ ಗೊಳಿಸುವ ಕೆಲಸವಿತ್ತು ಅಂತೆಯೇ ಬೇರೆ ಬಾಗಗಳಲ್ಲಿ ನಡೆದ ಶಾಂತ ಹೋರಾಟದ ಜೊತೆಗೆ ಬಸವಕಲ್ಯಾಣದ ತಾಲುಕಿನ ಗೋರ್ಟಾ ಬಿ ಗ್ರಾಮ ಶಾಂತಿ ಮತ್ತು ಕ್ರಾಂತಿ ಹೋರಾಟಗಳೆರಡನ್ನು ಸಂಘಟಿಸುವರು ಇಲ್ಲೆ ಉಲ್ಲೇಖಾರ್ಹ.

ಹೈದ್ರಾಬಾದ ಕರ್ನಾಟಕದಲ್ಲಿ ಮತಾಂಧ ಖಾಸಿಂ ರಜ್ವಿ ಮತ್ತು ಆತನ ಬೆಂಬಲಿಗರ ಹುಚ್ಚುತನಗಳಿಂದ ಬೇಸತ್ತ ನಾಯಕರು ತೀವ್ರ ರೀತಿಯಲ್ಲಿ ರಾಷ್ಟ್ರೀಯತೆಯನ್ನು ಜನರಲ್ಲಿ ಮುಡಿಸಿದರು ತಿಲಕರು , ತಾರಾನಾಥರು ಸ್ವಾಮಿ ರಮಾನಂದ ತಿರ್ಥರು, ಮುಂತಾದ ನಾಯಕರ ಪ್ರತಿಫಲವಾಗಿ ಬೀದರ ಜಿಲ್ಲೆಯಾದಂತ್ಯೆ ರಾಷ್ಟ್ರೀಯ ಚಳುವಳಿ ತೀವ್ರಗತಿಯಲ್ಲಿ ಸಾಗಿತ್ತು. ಈ ಹೋರಾಟಕ್ಕೆ ಕಳಸ ಪ್ರಾಯವೆಂಬಂತ್ತೆ ಬಸವಕಲ್ಯಾಣ ತಾಲುಕಿನ ಗೋರ್ಟಾ ಜನತೆ ತ್ಯಾಗ ಬಲಿದಾನಗಳಿಗೆ ಹೆಸರು ವಾಸಿಯಾದವರು ಅವರ ಅಧಮ್ಯ ಛಲ ಅಪ್ರತಿಮ ಶೌರ್ಯ ನಿರಂತರ ಹೋರಾಟ ಸಾತ್ವಿಕ ಬದುಕು ನಿಜಕ್ಕೂ ಇತಿಹಾಸದ ಪುಟಗಳಲ್ಲಿ ಅರ್ಥಟಿಸುವಂತಹಗಳು.

ಬಸವಕಲ್ಯಾಣ 12ನೇ ಶತಮಾನದಿಂದಲೆ ಭರತ ಖಂಡದಲ್ಲಿ ತನ್ನದೆ ಆದ ವಿಶಿಷ್ಟ ಸ್ಥಾನ ಮಾನವನ್ನು ಪಡೆದುಕೊಂಡ ನಾಡಾಗಿದ್ದು. ಇದು ಶರಣರ ಬೀಡು, ಕಾಯಕದ ನಾಡು, ಕಾಯಕವೇ ಕೈಲಾಸ ಎಂದು ನಂಬಿ ಗೋರ್ಟಾ ಜನತೆ ಮಾಡುವ ಕೆಲಸವನ್ನು ಶ್ರದ್ಧೆಯಿಂದ ಜೀವಿಸುವ ಶ್ರಮಜೀವಿಗಳು ಅಂತಹ ಸಮಯದಲ್ಲಿ ಗೋರ್ಟಾ ಗ್ರಾಮದಲ್ಲಿ ರಜಾಕಾರರ ಹಾವಳಿ ಹೆಚ್ಚಾಗ ತೊಡಗಿತು. ಹಲವು ವಿದ್ವಾಂಸರು ಭಾರತದ ರಾಷ್ಟ್ರದ ಚಳುವಳಿಗೆ ದೇಶದ ತುಂಬೆಲ್ಲ ಹಲವಾರು ಜನ ತ್ಯಾಗ ಬಲಿದಾನ ಹೋರಾಟಗಳನ್ನು ನಡೆಸಿದ್ದಾರೆ ಆದರೆ ಒಂದು ಉರಿನ ಸಮಸ್ತ ಜನ ಸಮುದಾಯವು ಸ್ವತಂತ್ರ್ಯ ಅಗ್ನಿ ಜ್ವಾಲೆಯಲ್ಲಿ ಬೆಂದು ಹುತಾತ್ಮಕರಾಗಿರುವರು. ಕನ್ನಡ ನಾಡಿನಲ್ಲಿ ಮಾತ್ರ ಎಂಬ ಮಾತನ್ನು ಗಮನಿಸಿದಾಗ ಗೋರ್ಟಾ ಬಿ ಗ್ರಾಮ ಕೈಗೊಂಡ

ಹೋರಾಟ ಮಾಡಿದ ತ್ಯಾಗ ಬಲಿದಾನ ಭಾರತದ ಇತರರ ಯಾವ ಭಾಗದ ಹೋರಾಟಕ್ಕಿಂತ ಕಡಿಮೆ ಯಾಗಿರಲಿಲ್ಲ . ಈ ಘಟನೆ ಭಾರ್ದೋಲಿ ಸತ್ಯಾಗ್ರಹ ಉಪ್ಪಿನ ಸತ್ಯಗ್ರಹ ಜಲಿಯಾನ ವಲಾಬಾಗ ಹತ್ಯಕಾಂಡ ಚೌರಿ ಚೌರಾ ಘಟನೆ ಈಸುರು ದುರಂತ ವಿಧುರಾಶ್ವಥ ಘಟನೆ ಹಲಗಲಿಯ ಬೇಡರ ಹೋರಾಟ ಇತ್ಯಾದಿ ನೂರಾರು ಕೆಚ್ಚದೆಯ ಹೋರಾಟಗಳಿಗೆ ಸಮಾನವಾದ ಹೋರಾಟ ಗೋರ್ಟಾ ಹತ್ಯಾಕಾಂಡವಾಗಿದೆ.

ಈ ಹತ್ಯಾಕಾಂಡದ ಸುದ್ದಿಯನ್ನು ತಿಳಿದ ಸರ್ಕಾರ ಹೈದ್ರಾಬಾದ ಸರ್ಕಾರವನ್ನು ಭಾರತದ ಒಕ್ಕೂಟದಲ್ಲಿ ಜನತೆ ತ್ಯಾಗ ಮತ್ತು ಬಲಿದಾನ ಅವಿಸ್ಮರಣಿಯ ನಿಜಾಂರ ರಾಜ ಪ್ರಭುತ್ವ ಮತ್ತು ಮತಾಂಧತೆಯಿಂದ ಮದಿಸಿದ ಮತಿಯ ಶಕ್ತಿಗಳು ಹಾಗು ರಾಷ್ಟ್ರದ್ರೋಹಿಗಳ ವಿರುದ್ದ ಹೋರಾಟದ ಕಥೆಯೆ ಈ ಭಾಗದ ನಿಜವಾದ ಸ್ವತಂತ್ರ ಚಳುವಳಿ ಪೋಲಿಸ ಕಾರ್ಯಚರಣೆಯ ಪೂರ್ವದಲ್ಲಿ ಹೈದ್ರಾಬಾದ ಕರ್ನಾಟಕವು ಸಾಮಾಜಿಕ ಭದ್ರತೆ ರಾಜಕೀಯ ಅಸ್ಥಿರತೆ ಆರ್ಥಿಕ ಮತ್ತು ಧಾರ್ಮಿಕ ಶೋಷಣೆಗಳ ಪ್ರತಿಬಿಂಬವಾಗಿತ್ತು. ಇಂತಹ ಸಂಧಿಗ್ಧತೆಯಲ್ಲಿ ಧಾರ್ಮಿಕ ಮತ್ತು ನಾಗರಿಕ ಹಕ್ಕುಗಳನ್ನು ಪ್ರತಿಷ್ಠಾಪಿಸಲು ಪ್ರಥಮ ಭಾರಿಗೆ ಆರ್ಯ ಸಮಾಜ ಹಿಂದು ಮಹಾ ಸಭಾಗಳು ತಿರ್ಮಾನಿಸಿ ಧಾರ್ಮಿಕ ಭಾವನೆಗಳನ್ನು ಪ್ರಚೋದಿಸಿ ನಿಜಾಂನ ವಿರುದ್ದ ಸತ್ಯಾಗ್ರಹ ಚಳುವಳಿ ರೂಪಿಸಿದ್ದವು.

1938ರಲ್ಲಿ ಸ್ಪೋಟಗೊಂಡ ಬಾಲಗಂಗಾಧರ ತಿಲಕರ ವಂದೇ ಮಾತರಂ ಚಳುವಳಿ ಮತ್ತು ಸ್ವಾಮಿ ರಮಾನಂದ ತಿರ್ಥರ ಕ್ರಿಯಾತ್ಮಕ ನಾಯಕತ್ವ ನಿಜಾಂ ಸಂಸ್ಥಾನದ ಜನರಲ್ಲಿ ರಾಷ್ಟ್ರೀಯ ಮತ್ತು ರಾಜಕೀಯ ಜಾಗೃತಿಯನ್ನು ಉಂಟು ಮಾಡಿದರು ಆಗ ಕೋಮು ಗಲಭೆಗೆ ನಾಂದಿ ಹಾಡಿದರು. ಈ ಅಪಾಯ ಅರಿತು ಭಾರತ ಸರ್ಕಾರ ಹಾಗು ಉಪ ಪ್ರಧಾನಿ ಸರ್ದಾರ ವಲ್ಲಭಾಯಿ ಪಟೇಲ್‌ರ ನೇತೃತ್ವದಲ್ಲಿ 1948 ಸೆಪ್ಟಂಬರ 13ರಂದು ಪೋಲಿಸ್ ಕಾರ್ಯಚರಣೆಗೆ ಆಜ್ಞೆ ಹೊರಡಿಸಿದರು.ಜನರಲ್ ಜೆ.ಎನ್.ಚೌಧರಿ ನಾಯಕತ್ವದಲ್ಲಿ ಭಾರತೀಯ ಸೇನೆ ನಿಜಾಂ ರಾಜ್ಯವನ್ನು ಅಷ್ಟ ದಿಕ್ಕುಗಳಿಂದ ದಾಳಿ ಮಾಡಿತು.

17ನೇ ಸೆಪ್ಟಂಬರ 1948ರಂದು ಸಂಜೆಯ 5ಗಂಟೆಗೆ ನಿಜಾಂ ಶರಣಾಗತನಾಗಿ ಭಾರತದ ಒಕ್ಕೂಟಕ್ಕೆ ಸೇರುವ ಪತ್ರಕ್ಕೆ ಸಹಿ ಹಾಕಿದ ಈ ಸಹಿ ಹಾಕಲು ಇಲ್ಲಿಯ ಹೋರಾಟಗಾರರು ತನು,ಮನ, ಧನ ಮತ್ತು ಸರ್ವಸ್ವವನ್ನು ದೇಶಕ್ಕೆ ಅರ್ಪಿಸಿದರು. ಈ ಸಮಯದಲ್ಲಿ ನಡೆದ ಗೋರ್ಟಾ ಹತ್ಯಕಾಂಡವನ್ನು ಪರಿಶಿಲಿಸಿ ಅದಕ್ಕೆ ಪರಿಹಾರ ನೀಡಲು ಹೇಳಿದರು.ಇಂತಹ

ಒಂದು ಅಪ್ರತಿಮ ಹೋರಾಟ ಕನ್ನಡ ನಾಡಿನಲ್ಲಿ ನಡೆದು ಭಾರತ ರಾಷ್ಟ್ರೀಯ ಚಳುವಳಿಯ ಹೋರಾಟಕ್ಕೆ ಅಪಾರ ಪ್ರಮಾಣದಲ್ಲಿ ಕೊಡುಗೆಯನ್ನು ಸಲ್ಲಿಸಿದೆ.

## ಅಧ್ಯಯನದ ಉದ್ದೇಶ

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅಸಂಖ್ಯೆ ದೇಶಭಕ್ತರು, ಅನೇಕ ವಿಧಗಳಲ್ಲಿ ಕಷ್ಟ ಕಾರ್ಪಣ್ಯ ಅನುಭವಿಸಿರುತ್ತಾರೆ. ಜೈಲುವಾಸ, ಪ್ರಾಣತ್ಯಾಗ,ಹುತಾತ್ಮತೆ ಮುಂತಾದ ಕಷ್ಟ ಕಾರ್ಯಗಳನ್ನು ಅನುಭವಿಸಿರುವುದನ್ನು ಅರಿಯಬಹುದಾಗಿದೆ.

ಹೋರಾಟದಲ್ಲಿ ಪಾಲ್ಗೊಂಡು ದೊಡ್ಡವರಾದವರ ದೇಶಭಕ್ತಿ, ತ್ಯಾಗ ಇವು ವ್ಯಾಪಕವಾಗಿ ಪ್ರಸಿದ್ಧತೆಯನ್ನು ಪಡೆದಿರುತ್ತವೆ. ಹೀಗಾಗಿ ಆಗಬೇಕಾದದ್ದು ಆದರೆ ದೊರೆಯಬೇಕಾದದ್ದು ದೊರೆತರೆ ಅಲ್ಲಿ ಮಹಾನ್ ಯೋಧರುಗಳ ಹೆಗ್ಗಳಿಕೆ ಮಾತ್ರ ಕಾಣಿಸುತ್ತದೆ. ಆದರೆ ಶ್ರೀ ಸಾಮನ್ಯರು ಸಲ್ಲಿಸಿದ ಪ್ರಾಣತ್ಯಾಗ, ಬಲದಾನ, ಅಳಲುಸೇವೆ ಬೆಳಕಿಗೆ ಬರದೆ ಹೋಗುತ್ತದೆ. ಅವರ ಪಾತ್ರವೇನು ಕಡಿಮೆಯೇನಲ್ಲ. ಈ ಹೋರಾಟದಲ್ಲಿ ಭಾಗವಹಿಸಿ ಸುರಂಗವಾಸ, ನರಕವಾಸ ಅನುಭವಿಸದವರ ಹೆಸರು ಬೆಳಕಿಗೆ ತರುವುದೆ ಈ ಅಧ್ಯಯನದ ಪ್ರಥಮ ಉದ್ದೇಶ.

ಸ್ವಾತಂತ್ರ್ಯ ನಮಗೆ ಲಭಿಸಿದುದು ಇತಿಹಾಸಕಾರರು ಇಲ್ಲಿಯವರೆಗೂ ಗುರುತಿಸುವ ಹಿರಿಯ ನಾಯಕರಿಂದ ಮಾತ್ರವಲ್ಲ, ಇತಿಹಾಸದ ಪದರಿನಲ್ಲಿ ಐಕ್ಯವಾಗಿ ಹೋಗಿರುವ ನೂರಾರು, ಸಾವಿರಾರು ಹೋರಾಟಗಾರರ ಹುತಾತ್ಮರ ಹುಮ್ಮಸ್ಸು ಮತ್ತು ಸಾಹಸದ ಫಲ. 1947ರ ಭಾರತದ ಬಿಟ್ಟು ತೊಲಗಿ ಅಂದೋಲನ ಸಾಂಕೇತಿಕ ಮಾತ್ರ,ಅದರ ಕಾರ್ಯಕ್ಷೇತ್ರ ಕರ್ನಾಟಕದಲ್ಲಿನ ಹಲವಾರು ಬಂಡಾಯಗಳಂತೆ, ಗೋರ್ಟಾ ಬಿ ಗ್ರಾಮದ ಹೋರಾಟ ನಿಜವಾಗಿ ಪ್ರಭಲವಾಗಿತ್ತು. ಕಿತ್ತೂರಿನ, ಸಿಂದಗಿ, ಹಲಗಲಿ, ಮುಂಡರಗಿಯಲ್ಲಿ ನಡೆದಂತಹ ಎಲ್ಲ ಬಂಡಾಯಗಳ ಸರಪಳಿಯಲ್ಲಿ ಸತ್ಯ, ಅಹಿಂಸೆ, ತ್ಯಾಗ, ಶಾಂತಿಯನ್ನು ಮೆರೆದು ಗಾಂಧೀಜಿಯನ್ನು ಮಹಾತ್ಮನನ್ನಾಗಿ ಮಾಡಿದರು. ಸುಭಾಸಚಂದ್ರ ಭೋಸರನ್ನು ವೀರ ಕ್ರಾಂತಿಕಾರಿಯನ್ನಾಗಿಸಿದರು. ವಾದ ಮಾಡಿ ಜವಾಹರಲಾಲ ನೆಹರೂರವರನ್ನು ಜನನಾಯಕನನ್ನಾಗಿ ಮಾಡಿದರು. ಇಂದು ಆ ಅಜ್ಞಾತ ಹೋರಾಟಗಾರರಿಗೆ ಇತಿಹಾಸದಲ್ಲಿ ಸ್ಥಾನ ದೊರಕಿಲ್ಲ. ದೊರಕುವ ಸಂಭವವೂ ಇಲ್ಲ.ಆದ್ದರಿಂದ ಗೋರ್ಟಾ ಬಿ ಗ್ರಾಮದಲ್ಲಿಗ ಸ್ವಾತಂತ್ರ್ಯ ಚಳುವಳಿಯ ಉಗಮದ ಬಗ್ಗೆ ಶೋಧಿಸುವದು, ಸ್ವಾತಂತ್ರ್ಯ ಹೋರಾಟದ ಇತಿಹಾಸ ಚಳುವಳಿಯಲ್ಲಿ ಎಷ್ಟು ಜನರು ಪ್ರೇರಕವಾದ ಸಂಗತಿಗಳನ್ನು ತಿಳಿದುಕೊಳ್ಳುವದು ಚಳುವಳಿಯ ಕಾಲಕ್ಕೆ ತಾಲೂಕಿನಲ್ಲಿ ವಾತಾವರಣವನ್ನು ತಿಳಿಯುವುದರಿಂದ ಸತ್ಯ ಅಹಿಂಸೆ, ಸತ್ಯಾಗ್ರಹ ಮುಂತಾದ ತತ್ವಗಳ ಪಾತ್ರಗಳನ್ನು ಅರಿತುಕೊಳ್ಳುವದು ಈ ಅಧ್ಯಯನದ ಉದ್ದೇಶವಾಗಿದೆ.

ಒಟ್ಟಾರೆ ಭಾರತದ ಬಿಡುಗಡೆಯಲ್ಲಿ ಗೋರ್ಟಾ (ಬಿ) ಗ್ರಾಮ ಯಾವ ರೀತಿಯಾಗಿ ತನ್ನ ಪಾಲಿನ ಕರ್ತವ್ಯವನ್ನು ಪೂರೈಸಿದೆ ಎಂಬುದನ್ನು ಅವಲೋಕಿಸುವುದೇ ಪ್ರಸ್ತುತ ಅಧ್ಯಯನದ ಆಯ್ಕೆಯ

ಉದ್ದೇಶವಾಗಿದೆ ಭಾರತವನ್ನು ರಜಾಕಾರರ ಆಳ್ವಿಕೆಯಿಂದ ಮುಕ್ತಗೊಳಿಸಬೇಕಾದರೆ, ನಮ್ಮ ಚಳುವಳಿಗಾರರು ವಹಿಸಿದ ಕ್ರಮ, ಕ್ರೀಯಾಶಿಲ ರೀತಿಯ ಪ್ರೇರಕ ಶಕ್ತಿಯನ್ನು ಹೊಂದಿತ್ತು ಎಂದು ಅರಿಯಬಹುದು. ಭಾರತವನ್ನು ಸ್ವತಂತ್ರ ರಾಷ್ಟ್ರವನ್ನಾಗಿ ಮಾಡಲು ಈ ತಾಲೂಕಿನಲ್ಲಿ ನಡೆದ ದೀರ್ಘಕಾಲಾವಧಿಯ ರಾಷ್ಟ್ರೀಯ ಚಳುವಳಿಯ ಕುರಿತು ಅನೇಕ ವಿವರವಾದ ಗ್ರಂಥಗಳು ಇರುವದಿಲ್ಲ. ಮುಖ್ಯವಾಗಿ ಸಂಶೋಧನಾ ದ್ರಷ್ಟಿಯಿಂದ ಗೋರ್ಟಾ ಹತ್ಯಕಾಂಡವುನ್ನು ಎಂಬ ಪ್ರಬಂಧವನ್ನು ರಚಿಸಲಾಗಿದೆ.

# ಅಧ್ಯಯನದ ವಿಧಾನ

ಈ ಅಧ್ಯಯನವು ಪ್ರಾಥಮಿಕ ಮತ್ತು ಅನುಷಂಗಿಕ ಅಂಕಿ-ಅಂಶಗಳ ಮಾಹಿತಿಯ ಮೇಲೆ ಅವಲಂಬನೆಯನ್ನು ಹೊಂದಿರುವದು. ಪ್ರಾಥಮಿಕ ಅಂಶಗಳಲ್ಲಿ ಸ್ವಾತಂತ್ರ್ಯ ಯೋಧರನ್ನು ಖುದ್ದಾಗಿ ಬೇಟಿಯಾಗಿ ವಿಷಯಗಳನ್ನು ಸಂಗ್ರಹಿಸಿ ತಾಳೆ ನೋಡಿ ಅಂಕಿ ಅಂಶಗಳನ್ನು ಅಧಿಕೃತವೆಂದು ನಿರ್ಧರಿಸಿದ ಮೇಲೆ ಇಡಿಯಾಗಿ ಗ್ರಂಥ ರಚನೆ ಮಾಡಬೇಕು. ಕೇವಲ ಅವರ ಅಲ್ಪಸ್ವಲ್ಪ ವಿಷಯಗಳನ್ನು ಸಂಗ್ರಹಿಸಿ ಪ್ರಬಂಧ ಬರೆಯುವದು ಹೇಗೆ ಸಾಧ್ಯ ಎಂದು ಭಯವಾಯಿತು. ಆ ಬಗೆಗೆ ಇರುವ ಗ್ರಂಥ ಸಾಮಗ್ರಿ ಅತ್ಯಲ್ಪ ಇಲ್ಲವೆಂದು ಒಪ್ಪುತ್ತೆವೆ. ಅಂದಮೇಲೆ ಒಂದು ಪ್ರಬಂಧ ಬರೆಯುವುದು ಸಾಧ್ಯವೆ. ಕಾರ್ಯರಂಭ ಮಾಡಿದ್ದಾಯಿತು. ನಿಲ್ಲಿಸಬಾರದೆಂದು, ನಿಶ್ಚಯಿಸಿ ಹೊಸತೊಂದು ಸಂಗ್ರಹಣೆಗೆ ದಾರಿ ತೋರಿಸದಂತಾಯಿತು.

ಪ್ರತಿಯೊಂದಕ್ಕೂ ಹೊಸದಾಗಿ ಸಂಶೋಧನೆ ಮಾಡಬೇಕಾಯಿತು. ಹಲವು ಜನ ರಜಾಕಾರರ ಹಾವಳಿ ವಿರುಧ್ಧ ಹೋರಾಡಿದ ಹೋರಾಟಗಾರರನ್ನು ಭೇಟಿ ಮಾಡಿದೆ. ಒಬ್ಬರಿಂದ ಮತ್ತೊಬ್ಬರ ಪರಿಚಯವಾಯಿತು. ಒಂದರಿಂದ ಅಧಿಕೃತವಾದುದನ್ನು ಕಂಡುಕೊಳ್ಳಬೇಕಾದರೆ ಸಾಕಷ್ಟು ಸಮಯ ಹಿಡಿಯಿತು. ವಿಷಯ ಸಂಗ್ರಹಕ್ಕೆ ಸುಮಾರು ನಾಲ್ಕೈದು ತಿಂಗಳೆ ಬೇಕಾಯಿತು. ಮಾಹಿತಿ ಸಂಗ್ರಹಕ್ಕೆ ಅನುಸರಿಸಿದ ಕ್ರಮಗಳು ಕೆಳಗಿನಂತಿವೆ.

ಚಳುವಳಿಗಾರರಿಂದ, ಸಂಭಂಧಪಟ್ಟ ಸರಕಾರಿ ಕಾರ್ಯಲಯಗಳಿಂದ ಪಡೆದ ಮಾಹಿತಿಗಳು.

ವಿಷಯಕ್ಕೆ ಸಂಬಂಧಪಟ್ಟವರಿಗೆ ಪತ್ರಗಳನ್ನು ಬರೆದ ಮೇಲೆ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾವಹಿಸಿದವರು ಆ ಬಗ್ಗೆ ತಿಳಿದವರು, ಸಂಘ-ಸಂಸ್ಥೆಗಳು ಕಾಂಗ್ರಸ್ ಕಾರ್ಯಲಯ ಜಿಲ್ಲಾ ಕೇಂದ್ರ, ಬಂಧಿಖಾನೆ, ತಹಶಿಲ್ದಾರ ಕಛೇರಿ, ಮುಂತಾದವರು ತಮ್ಮ ದಾಖಲೆಗಳಿಂದ ಮಾಹಿತಗಳನ್ನು ಕಳಿಸಿಕೊಟ್ಟರು. ಇವು ವ್ಯವಸ್ಥಿತವಾದ ಲೇಖನಗಳಲ್ಲ, ಚೆಲ್ಲಾಪಿಲ್ಲಿಯಾಗಿ ನಿರುಪಣೆಗೋಂಡ ನೆನಪುಗಳು ಮಾಹಿತಿಗಳು, ಕೆಲವು ಒಂದೆರಡು ಸಾಲಿನ ಪತ್ರಗಳು, ಸುಮಾರು ವರುಷಗಳ ಘಟನೆಗಳಾಗಿದ್ದರಿಂದ ಇವುಗಳಲ್ಲಿ ಅನೇಕ ಅಭಿಪ್ರಾಯಗಳು ಅಂಕಿ-ಅಂಶಗಳು ಹಿಂದು ಮುಂದಾಗಿದ್ದವು. ಹಾಗೆಯೆ ಉತ್ಪ್ರೆಕ್ಷೆಯೂ ಸಾಕಷ್ಟಿತ್ತು. ಎಚ್ಚರಿಕೆಯಿಂದ ಪರಿಶೀಲಿಸಿ ಈ ಸಾಮಗ್ರಿಗಳನ್ನು ಹೇಳಿರುವದು ಖಾತ್ರಿಯಾದರೆ ಚಳುವಳಿಯಲ್ಲಿ ಅಥವಾ ಹೋರಾಟದಲ್ಲಿ ಸ್ವತ: ಭಾಗವಹಿಸಿದವರ ಅನುಭವಗಳಾದರೆ, ಅಂತಹ ಅಂಶಗಳಿಗೆ ಪ್ರಮುಖ ಆದ್ಯತೆ ನೀಡಲಾಗುತ್ತದೆ.

**ಚಳುವಳಿಗಾರರ ಸಂದರ್ಶನದಿಂದ ಮತ್ತು ಪ್ರಶ್ನಾವಳಿ ಸಹಾಯದಿಂದ ವಿಷಯ ಸಂಗ್ರಹಣೆ:**

ಗೋರ್ಟಾ ಹತ್ಯಾಕಾಂಡದ ಹೋರಾಟದಲ್ಲಿ ನೇರವಾಗಿ ಭಾಗವಹಿಸಿದವರನ್ನು ಕಂಡ ಬರೆದುಕೊಳ್ಳುವದೇನೆಂದರೆ, ವಿಷಯದ ವಸ್ತು ನಿಷ್ಠತೆಯನ್ನು ಸಂಗ್ರಹಿಸಲಾಯಿತು. ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸದಂತೆಯೇ ಚೆನ್ನಾಗಿ ಪ್ರಶ್ನೆಗಳನ್ನು ಕೇಳಿ ಅಭಿಪ್ರಾಯವನ್ನು ಕಲೆಹಾಕಿ ಟಿಪ್ಪಣೆ ಜೊತೆಗೆ ಭಾವಚಿತ್ರಗಳನ್ನು ತೆಗೆದುಕೊಳ್ಳಲಾಯಿತು. ಇವರೆಲ್ಲರು ಈಗ ಇಳಿವಯಸ್ಸಿನಲ್ಲಿದ್ದಾರೆ. ಒಟ್ಟು 40ಕ್ಕೂ ಹೆಚ್ಚು ಜನ ರಜಾಕಾರರ ವಿರುದ್ದ ಹೋರಾಡಿದ್ದು 10 ಜನ ಮಾತ್ರ ಜೀವಂತವಾಗಿದ್ದು. ಅವರಲ್ಲಿ ತಮ್ಮ ವೈಯಕ್ತಿಕ ಆರೋಗ್ಯದ ತೊಂದರೆಯಲ್ಲಿರುವದು ಕಂಡುಬರುತ್ತದೆ. ಮತ್ತು ಇನ್ನುಳಿದ ಹೋರಾಟಗಾರರೆಲ್ಲರು ಮೃತರಾಗಿದ್ದಾರೆ. ಬದುಕುಳಿದವರ ಹೇಳಿಕೆಗಳನ್ನು ಉಪಯೋಗಿಸಿಕೊಂಡಿದೆ. ಮತ್ತು ಮೃತರಾದವರ ಬಗ್ಗೆ ಅವರ ಮನೆಯ ಇನ್ನುಳಿದ ಸದಸ್ಯರಿಂದ ಅವರ ಮಕ್ಕಳಿಂದ ಮಾಹಿತಿ ಕೇಳಿ, ಕೆಲವು ಹಸ್ತಪ್ರತಿ ಮತ್ತು ಭಾವಚಿತ್ರ ಮುಂತಾದ ಆಕರಗಳನ್ನು ವಿನಂತಿಯಿಂದ ಕೇಳಿ ಪಡೆಯಲಾಗಿದೆ. ಜೀವಂತವಾಗಿ ಉಳಿದ ರಜಾಕಾರರ ಹೋರಾಟಗಾರರಿಂದ ಸುಶಿಕ್ಷಿತರಿದ್ದರಿಂದ ಅವರ ಸ್ವಹಸ್ತದಿಂದ ಮಾಹಿತಿ ಪಡೆಯಲಾಗಿದೆ. ಅನಕ್ಷ ರಸ್ಥರಿಗೆ ಪ್ರಶ್ನಾವಳಿಯಲ್ಲಿಯೇ ಪ್ರಶ್ನೆಗಳನ್ನು ಕೇಳಿ ವಿಷಯ ಸಂಗ್ರಹಣೆ ಮಾಡಲಾಗಿದೆ.

ಈ ಹೋರಾಟಗಾರರ ಎಲ್ಲ ಮಾಹಿತಿಯು ಅವರ ನೆನಪಿನ ಮೇಲೆ ನೆಲೆ ನಿಂತಿದೆ. ನಿರ್ದಿಷ್ಟ ದಾಖಲೆಗಳಿಲ್ಲ. ಗುರಿ ಸಾಧನೆಗೆ ಉಪಯೋಗಿಸಿದ ಕ್ರಮಗಳು, ಪರಿಚಯ, ಮಾತ್ರ ಸ್ಮರಣಿಯ ಎಂದು ಗೋಚರಿಸುತ್ತದೆ. ಬೇರೆ ಬೇರೆ ಸತ್ಯಾಗಹಿಗಳ ಹೇಳಿಕೆಗಳಲ್ಲಿ ಕ್ರಮಬದ್ಧವಾದ ಅಂಶಗಳು ಹಿಂದು ಮುಂದಾಗಿದ್ದರು ವಸ್ತು ನಿಷ್ಠ ವಿಷಯ ಒಂದು ಆಗಿದ್ದರಿಂದ ಅದನ್ನು ಹೇಳಿಕೆಗಳ ಆಧಾರದಿಂದ ಕ್ರಮದ್ಧತೆಯ ಹಾದಿಯಲ್ಲಿ ಕ್ರೋಢಿಕರಿಸಿ ಬರೆಯಲಾಗಿದೆ. ನೋಡಿದವರಿಗಿಂತ, ಕೇಳಿದವರಿಗಿಂತ ರಜಾಕಾರರ ಹೋರಾಟದಲ್ಲಿ ವಿವಿಧ ಚಳುವಳಿಗಳಲ್ಲಿ ಸಕ್ರೀಯವಾಗಿ ಪಾಲ್ಗೊಂಡಿದ್ದರಿಂದ ಅನುಭವಗಳಿಗೆ ಹೆಚ್ಚು ಗಮನ ಕೊಟ್ಟು ಅಂಥವರನ್ನು ಸಂದರ್ಶಿಸಿದಾಗ ವಿಚಿತ್ರವಾದ ಅನುಭವಗಳಾದವು. ರಜಾಕಾರರ ಹೋರಾಟಗಾರರ ನೆನಪಿನ ಬುತ್ತಿಯಂತೆ ಗೋಚರಿಸಿದ ಕಾಗದ ಪತ್ರಗಳು ಕೆಲವರಿಂದ ದೊರೆತವು ಆದ್ದರಿಂದ ವಿಷಯದಲ್ಲಿ ಪ್ರಾಮುಖ್ಯತೆ ಉತ್ಕೃಷ್ಟವಾಯಿತು.

ಏನೆ ಆದರೂ ನಾನು ಕ್ಷೇತ್ರ ಕಾರ್ಯಕ್ಕೆ ಹೋದಾಗ ರಜಾಕಾರರ ಹೋರಾಟಗಾರರು ತೋರಿದ ಸಹಾಯ, ಸಹಕಾರ ಅಪೂರ್ವವಾದುದು. ಪ್ರೀತಿಯಿಂದ ಬರಮಾಡಿಕೊಂಡು ತಮಗೆ ತಿಳಿದ್ದಿದ್ದ ಎಲ್ಲ ವಿಷಯವನ್ನು ಹೇಳಿದರು ಇದರಿಂದ ನನ್ನ ಅಧ್ಯಯನಕ್ಕೆ ಹೊಸ ಚಾಲನೆ ದೊರೆತಂತಾಯಿತು.

ಈ ಅಧ್ಯಯನಕ್ಕೆ ಮುಖ್ಯ ಉದ್ದೇಶ ರಜಾಕಾರರ ಹೋರಾಟದಲ್ಲಿ ಹೋರಾಟಗಾರರ ಪಾತ್ರ ಅವರ ಧೈರ್ಯ, ಸಾಹಸ ಸಮಯಸ್ಫೂರ್ತಿ, ದೇಶಪ್ರೇಮ ತಾಳ್ಮೆ, ತ್ಯಾಗ, ಬಲಿದಾನ ಇವುಗಳನ್ನು ಬೆಳಕಿಗೆ ತರಬೇಕೆಂದು ಕಾತುರವಿದ್ದ ನನ್ನ ಮನಸ್ಸಿನ್ನು ಅರಿತಂತೆ ಅವರಿದ್ದ ಸ್ಥಳಕ್ಕೆ ಹೋಗಿ ಭೇಟಿಯಾಗಿ ಮಾತನಾಡಿಸಿದ್ದೇನೆ. ತಾವಾಗಿಯೇ ಹೇಳಿದ ಅವರ ಅನುಭವ  ಅವರ ತ್ಯಾಗ ಜೀವನ ಕಣ್ಣೆದರು ಚಲಿಸದಂತೆ ವಿವರಿಸಿದರು. ಅವರಿಂದ ನಾನು ಕಲಿತ ವಿಷಯ ಅಪಾರ,

ಈ ಎಲ್ಲಾ ಮಾಹಿತಿಯು ತಿಳಿಯಲು ಕ್ಷೇತ್ರ ಅಧ್ಯಯನಕ್ಕೆ ಒತ್ತುಕೊಟ್ಟು ಸಂಶೋಧನೆ ಮಾಡಲಾಗಿದೆ. ಈ ಎಲ್ಲ ಅನುಷಂಗಿಕ ವಿಷಯಗಳನ್ನು ಎಲ್ಲ ಅಂಶಗಳನ್ನು ಕಲೆಹಾಕುವಲ್ಲಿ ಪತ್ರಿಕೆಗಳ ಪಾತ್ರ ಗಣನೀಯ ಎಂಬುದನ್ನು ಭಾವಿಸಬಹುದಾಗಿದೆ.

## ವ್ಯಾಪ್ತಿ:

ಈ ಅಧ್ಯಯನವನ್ನು ಕ್ರಮಬದ್ಧವಾಗಿ 6 ಪ್ರಧಾನ ಅಧ್ಯಾಯಗಳಲ್ಲಿ ವಿಂಗಡಿಸಲಾಗಿದೆ. ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತಾವನೆ ಎಂಬ ತಲೆಬರಹದ ಅಡಿಯಲ್ಲಿ ಸ್ವಾತಂತ್ರ್ಯವೆಂದರೇನು? ಅರ್ಥ ಮತ್ತು ವ್ಯಾಖ್ಯೆಗಳು ಸ್ವಾತಂತ್ರ್ಯ ಹೋರಾಟಾದ ನೈತಿಕ ಸಿದ್ದಾಂತ ಮತ್ತು ಗೊರ್ಟಾ ಹತ್ಯಾಕಾಂಡ ಸ್ವಾತಂತ್ರ್ಯ ಚಳುವಳಿಯ ಕುರಿತು, ಅಧ್ಯಯನದ ಉದ್ದೇಶ ಮತ್ತು ವಿಧಾನ ಹಾಗೂ ವ್ಯಾಪ್ತಿಯು ಪ್ರಮುಖ ಅಂಶಗಳನ್ನು ಒಳಗೊಂಡಿರುತ್ತದೆ.

ಮೊದಲನೆ ಅಧ್ಯಾಯನದಲ್ಲಿ ಗೋರ್ಟಾ ಹತ್ಯಾಕಾಂಡದ ಕುರಿತು ಪೀಠಿಕೆಯನ್ನು ಕುರಿತು ರಜಾಕಾರರ ಹಾವಳಿ ಅಧ್ಯಾಯನದ ಉದ್ದೇಶ ಮತ್ತು ಮಹತ್ವ ವ್ಯಾಪ್ತಿಯನ್ನು ಕುರಿತು ವಿವರಿಸಲಾಗಿದೆ.

ಎರಡನೆ ಅಧ್ಯಾಯನದಲ್ಲಿ ಗೋರ್ಟಾ ಗ್ರಾಮದ ಭೌಗೋಳಿಕತೆ ಐತಿಹಾಸಿಕ ಹಿನ್ನೆಲೆ ಕುರಿತು ವಿವರಿಸಲಾಗಿದೆ.

ಮೂರನೆಯ ಅಧ್ಯಾಯನದಲ್ಲಿ ರಾಷ್ಟ್ರೀಯ ಚಳುವಳಿಗೆ ಪ್ರೇರಕವಾದ ಅಂಶಗಳ ಕುರಿತು ವಿವರಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಗೋರ್ಟಾ ಹತ್ಯಾಕಾಂಡದ ಮೇಲೆ ರಜಾಕಾರರ ಪ್ರಭಾವ ಕುರಿತು ವಿವರಿಸಲಾಗಿದೆ ಕಾರಣಗಳು ಮತ್ತು ಪರಿಣಾಮಗಳು ಅದರ ಜೊತೆ ಬುಲಾಯಿ ಹಾಡುಗಳು ಜನಪದ ಸಾಹಿತ್ಯ ಮತ್ತು ಐತಿಹ್ಯಗಳ ಕುರಿತು ವಿವರಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಗೋರ್ಟಾ ಹತ್ಯಾಕಾಂಡದ ಕಾರಣಗಳು ಮತ್ತು ಪರಿಣಾಮಗಳು ಅದರ ಜೊತೆ ಬುಲಾಯಿ ಹಾಡುಗಳು ಜನಪದ ಸಾಹಿತ್ಯ ಮತ್ತು ಐತಿಹ್ಯಗಳ ಕುರಿತು ವಿವರಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಗೋರ್ಟಾ ಹತ್ಯಾಕಾಂಡದ ಉಪಸಂಹಾರ ಕುರಿತು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

# ನನ್ನ ಅನಿಸಿಕೆ

ಬೀದರ ಜಿಲ್ಲೆಯ ಬಸವಕಲ್ಯಾಣ ತಾಲುಕಿನ ಗೋರ್ಟಾ ಬಿ ಎನ್ನುವ ಗ್ರಾಮವನ್ನು ಕುರಿತು ನಾನು ಗೋರ್ಟಾ ಹತ್ಯಾಕಾಂಡ ಎನ್ನುವ ವಿಷಯವನ್ನು ತೆಗೆದುಕೊಂಡು ಸಂಶೋಧನಾ ಪ್ರಭಂದವನ್ನು ಬರೆಯುತ್ತಿದ್ದು ನಾನು ಪ್ರತ್ಯಕ್ಷವಾಗಿ ಗೋರ್ಟಾ ಗ್ರಾಮಕ್ಕೆ ಭೇಟಿಕೊಟ್ಟು ಅಲ್ಲಿರುವ ಜನತೆಯ ಅಭಿಪ್ರಾಯವನ್ನು ಸಂಗ್ರಹಿಸಿ ಗೋರ್ಟಾ ಹತ್ಯಕಾಂಡದ ವಿಷಯವನ್ನು ತಿಳಿದುಕೊಳ್ಳಲು ಮುಂದಾಗಿ ಆ ಘಟನೆಯ ವಿವರಣೆಯನ್ನು ಪಡೆದುಕೊಳ್ಳುತ್ತಾ ಹೋದೆ ಈ ಘಟನೆ 09.05.1948ರಂದು ನಡೆದ ಈ ಘಟನೆ ಆ ಊರಿನ ಅವಶೇಷವನ್ನು ಬದಲಿಸಿರುವ ಘಟನೆಯನ್ನು ಕೇಳಿ ನಾನು ಎಲ್ಲಾ ರೀತಿಯ ಮಾಹಿತಿಯನ್ನು ಪಡೆದುಕೊಳ್ಳಲು ಮುಂದಾಗಿ ಅಲ್ಲಿರುವ ಪ್ರಮುಖರನ್ನು ಭೇಟಿಯಾಗಿ ಅವರ ಕ್ರಾಂತಿಕಾರಿ ಹೇಳಿಕೆಗಳನ್ನು ಅವರಿಂದ ಪಡೆದುಕೊಂಡು ನಾನು ಸಂಪೂರ್ಣವಾಗಿ ಗೋರ್ಟಾ ಹತ್ಯಕಾಂಡದ ಮಾಹಿತಿಯನ್ನು ಪಡೆದುಕೊಂಡು ಅದರ ಬಗ್ಗೆ ವಿಷಯವನ್ನು ತೆಗುದುಕೊಳ್ಳಲಾಯಿತು.

ಈ ಒಂದು ದುರಂತ ಘಟನೆ ಆಗಿನ ಕಾಲದ ಜನರ ಜೀವನವನ್ನು ಕಷ್ಟಕರವನ್ನಾಗಿ ಮಾಡಿ ಆ ಊರಲ್ಲಿ ರಜಾಕಾರರ ಹಾವಳಿಯಿಂದ ಅಲ್ಲಿನ ಜನತೆಯ ಮನೆ ಮಠಗಳನ್ನು ಲೂಟಿ ಮಾಡಿ ಮತ್ತು ಊರನ್ನು ಬೆಂಕಿ ಹಚ್ಚಿ ಮತ್ತು ಊರಲ್ಲಿರುವ ಗೌರವಸ್ಥ ಹಿಂದೂ ಮಹಿಳೆಯರನ್ನು ಅತ್ಯಚಾರ ಮಾಡಿ ಅಲ್ಲಿನ ಸಂಪೂರ್ಣ ಸಂಪತ್ತನ್ನು ಕೊಳ್ಳೆ ಹೊಡೆದರು. ಈ ಘಟನೆಯಿಂದ ಅಲ್ಲಿನ 200ಕ್ಕು ಹೆಚ್ಚು ಜನರು ತಮ್ಮ ಪ್ರಾಣವನ್ನು ಕಳೆದುಕೊಂಡರು ಈ ರೀತಿಯಾಗಿ ಈ ಘಟನೆಯಿಂದ ಅದು ಅಸ್ತಿತ್ವವನ್ನು ಕಳೆದುಕೊಂಡಿತ್ತು.

ಈ ಘಟನೆಯಿಂದ ಅಲ್ಲಿರುವ ಎಲ್ಲಾ ವಿಷಯಗಳನ್ನು ತಿಳಿದಕೊಂಡ ನಾನು ಅಲ್ಲಿಗೆ ಬೇಟಿಕೊಟ್ಟು ಸಂಪೂರ್ಣವಾದ ಮಾಹಿತಿಯನ್ನು ಪಡೆದುಕೊಂಡು ಗೋರ್ಟಾ ಹತ್ಯಾಕಾಂಡದ ಕಾರಣ ಮತ್ತು ಪರಿಣಾಮಗಳನ್ನು ತಿಳಿದುಕೊಂಡು ಮತ್ತು ಹೇಳಿಕೆಗಳನ್ನು ಪಡೆದುಕೊಂಡು ಜನಪದ ಸಾಹಿತ್ಯ ಬುಲಾಯಿ ಹಾಡುಗಳು, ಅದರಲ್ಲು ಗೋರ್ಟಾ ಗ್ರಾಮದ ಘಟನೆ ಕುರಿತು ಹಾಡಿರುವ ಬುಲಾಯಿ ಹಾಡಿನ ಸ್ಪಷ್ಟ ಚಿತ್ರಣವನ್ನು 108ಸಾಲುಗಳ ಹಾಡನ್ನು ಕಾಣಬಹುದು. ಅದೇ ರೀತಿ ಗೋರ್ಟಾ ಹತ್ಯಾಕಾಂಡದ ಕುರಿತು ಮಾಹಿತಿಯನ್ನು ಪಡೆದುಕೊಂಡು ಅಲ್ಲಿ ಬರುವ ಪ್ರಮುಖ ಅವಶೇಷಗಳ ಪ್ರತ್ಯಕ್ಷ ಮಾಹಿತಿ ಪಡೆದು ಭಾವಚಿತ್ರಗಳನ್ನು ತೆಗೆದುಕೊಂಡ ಬರಲಾಯಿತು. ಈ ರೀತಿಯಾಗಿ ನಾನು ಈ ಹತ್ಯಕಾಂಡವನ್ನು ಕುರಿತು ಯಾವುದೆ ಜಾತಿಯ ಅವಹೇಳನ ಮಾಡದೆ ಆಗಿನ ಕಾಲದ ರಜಾಕಾರರ ಹಾವಳಿಯ ಕುರಿತು ಕೋಮು ಸೌಹಾರ್ದತೆ ಬೆಳಸದೆ ಆಗಿನ ಘಟನೆಯನ್ನು ನಾನು

ನನ್ನ ಪ್ರಭಂಧದಲ್ಲಿ ವಿಷಯವನ್ನಾಗಿ ಆಯ್ಕೆ ಮಾಡಿಕೊಂಡು ಬರೆಯುತ್ತಿದ್ದೆನೆ..

ಈ ರೀತಿಯಾಗಿ ಈ ಘಟನೆ ಐತಿಹಾಸಿಕ ಘಟನೆಯಾಗಿ ದೇಶದ ಇತಿಹಾಸದ ಪುಟಗಳಲ್ಲಿ ಆ ಘನ ಸರ್ಕಾರ ಕಾಳಜಿ ವಹಿಸಿ ಅದನ್ನು ಒಂದು ಐತಿಹಾಸಿಕ ಗ್ರಾಮವನ್ನಾಗಿ ಮಾಡಬೇಕೆಂದು ಮತ್ತು ಹೈದ್ರಾಬಾದ ಕರ್ನಾಟಕದ ಜಲಿಯನ ವಾಲಾಬಾಗ್ ಎಂದು ಘೋಷಣೆ ಮಾಡಬೇಕೆಂದು ಈ ಪ್ರಬಂಧದ ಮುಲಕ ನಾನು ವ್ಯಕ್ತಪಡಿಸುತ್ತೇನೆ.ಒಟ್ಟಾರೆ ಈ ಘಟನೆ ಒಂದು ದುರಂತ ಘಟನೆ ಎಂದು ಚಿತ್ರಸಬಹುದು.

# ಅಧ್ಯಾಯ-2

## ಭೌಗೋಳಿಕ ಲಕ್ಷಣಗಳು ಮತ್ತು ಐತಿಹಾಸಿಕ ಹಿನ್ನೆಲೆ

ಕಾಲಗರ್ಭದಲ್ಲಿ ಹೂತು ಹೋದ ದುರುಂತಗಳನ್ನು ಇತಿಹಾಸಕಾರರು ಮತ್ತೆ ಶೋಧಿಸಿ ಅವುಗಳನ್ನು ಜನರ ಗಮನಕ್ಕೆ ತರುವದು ಬಹಳ ಮಹತ್ವದಾಗಿದೆ. ಅಂತಹ ಒಂದು ಪ್ರಮುಖ ಘಟನೆ 1948ಮೇ ತಿಂಗಳು 9 ರಂದು ಗೋರಟಾ (ಬಿ) ಗ್ರಾಮದಲ್ಲಿ ನಡೆಯಿತು. ಗೋರಟಾ ಎನ್ನುವಂತಹ ಈ ಗ್ರಾಮ ಬೀದರ ಜಿಲ್ಲೆಯ ಬಸವಕಲ್ಯಾಣ ತಾಲ್ಲೂಕಿನಲ್ಲಿರುವ ಒಂದು ಗ್ರಾಮ ಅದು ಬಸವಕಲ್ಯಾಣದಿಂದ 18ಕಿ.ಮೀ. ದೂರದಲ್ಲಿದೆ. ಹಿಂದಿನ ಕಾಲದಲ್ಲಿ ಗೋರಟಾ ಎನ್ನುವಂತಹ ಗ್ರಾಮ ಚಾಲುಕ್ಯ ಅರಸರ ಸಾಂಸ್ಕ್ರತಿಕ ರಾಜಧಾನಿ ಎಂದು ಹೆಸರು ಪಡೆಯಿತು ಶಾಸನಗಳಲ್ಲಿ ಇದನ್ನು ಅಗ್ರಹಾರ ಗೋರಂಟಿ ಎಂದು ಕರೆಯುತ್ತಿದ್ದರು. ಸಾಹಿತ್ಯ ಸಂಗೀತದ ಚಟುವಟಿಕೆಗಳಿಂದಲ್ಲೂ ಈ ಗ್ರಾಮ ಈಗಲೂ ಪ್ರಸಿದ್ಧಿಯನ್ನು ಪಡೆದಿದೆ. ಗೋರಟಾದ ಗ್ರಾಮದ ಜನರು ಪ್ರಗತಿಪರ ಮತ್ತು ಕೃಷಿಯನ್ನು ಅವಲಂಬಿತರಾಗಿದ್ದರು. ಇಲ್ಲಿಯ ಜನರು ಸುಶಿಕ್ಷಿತರು. ಉದಾರಿಗಳು ಸಾಹಿತ್ಯ ಸಂಗೀತಗಳಲ್ಲಿಯೂ ಅಭಿರುಚಿಯನ್ನು ಪಡೆದುಕೊಂಡಿದರು 1948ರ ಪೂರ್ವದಲ್ಲಿ ಬೀದರ, ಗುಲಬರ್ಗಾ ಮತ್ತು ರಾಯಚೂರು ಜಿಲ್ಲೆಗಳಲ್ಲಿ ನಿಜಾಂ ಆಳ್ವಕೆ ಒಳಗೊಂಡಿತು. ಭಾರತದ ಒಕ್ಕೂಟಕ್ಕೆ ಸೇರಬಾರದೆಂದು ದೃಷ್ಟಿಯಿಂದ ನಿಜಾಂನು ಹೈದ್ರಾಬಾದ ಸಂಸ್ಥಾನವನ್ನು ಒಂದು ಸ್ವತಂತ್ರ, ಸಾರ್ವಭೌಮ ಮತ್ತು ಮುಸ್ಲಿಂ ರಾಷ್ಟ್ರವನ್ನಾಗಿ ಮಾಡಬೆಕೆಂದು ಇಚ್ಚಿಸಿದನು. ಹೈದ್ರಾಬಾದ ಸಂಸ್ಥಾನದಲ್ಲಿ ಹಿಂದೂಗಳು ಪ್ರತಿಶತ 87ರಷ್ಟು ಇದ್ದರು. ಆದರೂ ಮುಸ್ಲಿಂ ರಾಜ್ಯವಾಗಿತ್ತು. ಯಾಕೆಂದರೆ ರಜಾಕಾರರು ಹಿಂದೂಗಳ ಮೇಲೆ ಅಮೊನುಷ ಕೃತ್ಯವೆಸಗಿದರು. ಅವರು ಅನೇಕ ಗ್ರಾಮಗಳನ್ನು ಲೂಟಿಮಾಡಿ ಹಿಂದುಗಳನ್ನು ಅಮೊನುಷವಾಗಿ ಕೊಂದರು ಮುಂದೆ ಅಷ್ಟಕೇ ಬಿಡದೇ ಸ್ತ್ರೀಯರನ್ನು ಅಪಹರಿಸಿ ಅತ್ಯಚಾರವೆಸಗಿದರು. ಇಂತಹ ಸಂಧಿಗ್ಧ ಸಮಯದಲ್ಲಿ ಹಿಂದೂಗಳು ತಮ್ಮ ಆತ್ಮರಕ್ಷಣೆಗೋಸ್ಕರ ರಜಾಕಾರ ವಿರುದ್ದ ಹೊರಾಡಬೇಕಾಯಿತು ಆರ್ಯಸಮಾಜದ ನೇತೃತ್ವದಲ್ಲಿ ಹಿಂದೂಗಳು ಸಂಘಟಿತರಾಗಿ ರಜಾಕಾರರನ್ನು ನಿಯಂತ್ರಿಸಿದರು ಆದರೂ ರಜಾಕಾರ ಪೋಲಿಸರ ಸಹಾಯವಿದ್ದುದರಿಂದ ಅವರ ದುಷ್ಕ್ರತ್ಯಗಳಿಗೆ ಪ್ರೊತ್ಸಾಹವಿತ್ತು. ರಜಾಕಾರರು ಗೋರಟಾ ಗ್ರಾಮದ ಮೇಲೆ ದಾಳಿ ಮಾಡಿದ ವೃತಾಂತ್ತ ಮತ್ತು ಅವರ ಅಪರಾಧಗಳನ್ನು

ಜನರು ಗಮನಕ್ಕೆ ತರುವುದೇ ಪ್ರಸ್ತುತವಾದ ಜನತೆಗೆ ತಿಳಿಸುವ ಬಂದು ತತ್ವದ ಘಟನೆಯಾಗಿದೆ,

ಬಿದರ ಜಿಲ್ಲೆಯ ಬಸವಕಲ್ಯಾಣ ತಾಲೂಕಿನ ಗೋರಟಾ ಎನ್ನುವಮತಹ ಮೂದಲು ಈ ಗ್ರಾಮವು ನಿಜಾರ ಆಳ್ವಿಕೆಯಲ್ಲಿ ಚಿಟ್ಟಗುಪ್ಪಾ ಜಿಲ್ಲೆಯ ದುಬಲಗುಂಡಿ ತಾಲೂಕಿನ ಸೇರಿಕೋಡಿತು ಗೋರಟಾ ಎನ್ನುವಂತಹ ಗ್ರಾಮಕ್ಕೆ "ಕಸಬೇ ಮತ್ತು ಬುಜರ್ಗಗಳನ್ನು ಎಂದು ಕರೆಯುತ್ತಿದ್ದರು ಗೋರಟ ಗ್ರಾಮವು ಧಾರ್ಮಿಕ ಗ್ರಾಮವಾಗಿದ್ದು ಸೌಜನ್ಯ ಮತ್ತು ಸುಸಂಸ್ಕ್ರತ ಗ್ರಾಮವೆಂದು ಖ್ಯಾತಿ ಪಡೆದಿದೆ. ಈ ಗ್ರಾಮ ಬಸವಕಲ್ಯಾಣದಿಂದ 18ಕೀಮೀ ದೂರದಲ್ಲಿದೆ. ಹೀಗಾಗಿ ಈಗ್ರಾಮದ ಭೌಗೋಳಿಕ ಪರಿಸರ ವಿಶಿಷ್ಠತೆಯನ್ನು ಕಾಣಬಹುದು.

**ಜನಜೀವನ:–** ಗೋರಟಾ (ಬಿ)ಗ್ರಾಮದ ಜನಜೀವನ ಕೃಷಿಯನ್ನು ಅವಲಂಬಿಸಿರುವ ಒಂದು ಪ್ರಮುಖ ಹಳ್ಳಿ ಇದ್ದರಿಂದ ಈ ಒಂದು ಜನಜೀವನದಲ್ಲಿ 5000 ಜನಸಂಖ್ಯೆಯನ್ನು ಸುಮರಾಗಿ ಹೊಂದಿರುವಂತಹದ್ದು ಆಗಿದೆ ಹೀಗಾಗಿ ಅಲ್ಲಿನ ಜನರು ತಮ್ಮ ಜೀವನವನ್ನು ಸರಳ ರೀತಿಯಿಂದ ನಡೆಸಕೊಂಡು ಹೇಗುತ್ತಿದ್ದರು

**ವಿಸ್ತಿರಣ:– ಗೋರಟಾ (ಬಿ)** ಗ್ರಾಮದಲ್ಲಿರುವ ವಿಸ್ತಿರಣೆಯನ್ನು ಈ ರೀತಿಯಾಗಿ ಹೊಂದಿದೆ ಈ ಗ್ರಾಮದ ಪಶ್ಚಿಮಕ್ಕೆ ಬೆನಕನ ಹಳ್ಳವೆಂದು ಅದಕ್ಕೆ ಗಣಪತಿ ಶಿಲಾಮುರ್ತಿ ಕರೆಯುತ್ತಾರೆ. ಇಂದಿಗು ಬೆನಕನ ಶಿಲಾಮುರ್ತಿಯ ಮೂಂದಿನ ಭಾಗದಲ್ಲಿ ಕಂಚುಗಾರ ಹಾದಿಯನ್ನು ತೊಗಲೂರ ಗ್ರಾಮದ ಉತ್ತರ ದಿಕ್ಕಿನಿಂದ ದಕ್ಷಿಣದ ಕಡೆಗೆ ಒಂದು ದಾರಿ ಇದ್ದು ಆ ದಾರಿಯ ಮಧ್ಯೆ ಅಂದರೆ ಗೋರ್ಟಾದ ನೈರುತ್ಯ ದಿಕ್ಕಿನಲ್ಲಿ ಬೀರಾ ದೇವರು ಎಂಬ ಪ್ರಸಿದ್ದ ದೈವ ಸ್ಥಾನವಿದ್ದು ಆ ಸ್ಥಾನ ದಿಂದ ಊರ ಕಡೆಗೆ ಅಚಿದರೆ ಗೋರ್ಟಾದಿಂದ ಪಶ್ಚಿಮದಲ್ಲಿ ಮುಚಳಂಬಿಗೆ ಹೋಗುವ ದಾರಿಯಲ್ಲಿ ಕೇಶಿಕೆರೆ ಎನ್ನುವಂತಹ ನದಿ ಭಹಳ ಕಾಲದಿಂದಲು ಪ್ರಸಿದ್ಧಿಯನ್ನು ಪಡೆದಿದೆ ಕೇಶರಾಜನು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ದೊಡ್ಡ ಸಾಹಿತ್ಯ ಕಾರನಾಗಿದ್ದ ಮುಂದೆ ಗೋರ್ಟಾ ಗ್ರಾಮವು ಶಾಸನ ಪೇಟೆ ಎನ್ನುವಂತಹ ಒಂದು ಶಿಲಾಶಾಸನ ಹೊಂದಿದ್ದು ಅಲ್ಲಿ ಗೋರಕ್ಷನಾಥ ಎನ್ನುವ ಪ್ರಸಿದ್ದ ದೈವವಿದ್ದು ಮುಂದೆ ಗೋರ್ಟಾ ಹಾಗು ತೊಗಲೂರಿನ ಮಧ್ಯೆ ಸೀಮೆಯಲ್ಲಿ ಚುಳಕಿ ಎಂಬ ಹಳ್ಳ ಹರಿದು ಬರುತ್ತದೆ. ಹೀಗಾಗಿ ಗೋರ್ಟಾ ಗ್ರಾಮವು ತನ್ನ ವಿಸ್ತಿರ್ಣವನ್ನು ಈ ರೀತಿಯಾಗಿ ಹೊಂದಿದೆ.

**ಬೆಳೆಗಳು:–**

ಗೋರ್ಟಾ (ಬಿ) ಗ್ರಾಮ ಕೃಷಿಯನ್ನು ಅವಲಂಬಿಸಿರುವ ಒಂದು ಪ್ರಧಾನ ಗ್ರಾಮ ಅವರು ತಮ್ಮ ಜೀವನವನ್ನು ಹೊಲದಲ್ಲಿ ಬೆಳಗಳನ್ನು ಬೆಳೆಯುವದರ ಮುಲಕ ತಮ್ಮ ಜೀವನವನ್ನು ನಡೆಸುತ್ತಿದ್ದರು. ಅಲ್ಲಿ ಕಡಲೆ ಜೋಳ ಗೋಧಿ ಕಬ್ಬು ಕಳವಿ ಇನ್ನಿತರ ಧವಸ ಧಾನ್ಯಗಳನ್ನು ಬೆಳೆಯುತ್ತಿದ್ದರು. ಪ್ರಮುಖವಾಗಿ ಕಬ್ಬನ್ನು ಬೆಳೆಯುತ್ತಿದ್ದರು.

**ನದಿಗಳು:–**

ಗೋರ್ಟಾ (ಬಿ) ಗ್ರಾಮದ ಸುತ್ತಲು ಪ್ರಮುಖವಾಗಿ ಎರಡು ವಿಶಿಷ್ಟವಾಗಿ ನದಿಗಳು ಹರಿಯುತ್ತಿದ್ದವು ಅವುಗಳೆಂದರೆ ಭಾಲ್ಕಿ ಹತ್ತಿರ ವಿರುವ ಮಾಂಜ್ರಾ ನದಿ ಮತ್ತು ಮುಚಳಂಬದ ಹತ್ತಿರ ಬರುವ ಚುಳಕಿ ಕೆರೆ ಹರಿಯುತ್ತಿದ್ದು. ಗೋರ್ಟಾ ಜನತೆಗೆ ತಮ್ಮ ಜೀವನವನ್ನು ಸಹಾಯವಾಯಿತು. ಮತ್ತೆ ಗೋರ್ಟಾ ಗ್ರಾಮದ ಸುತ್ತಲು ಬೆನಕನ ಹಳ್ಳ ಕೇ.ಸಿಕೆರೆ. ಚೆಟ್ಟಿನ ಹಳ್ಳ, ಇನ್ನಿತರ ಪ್ರಮುಖ ಹಳ್ಳಗಳು ಹರಿಯುತ್ತಿದ್ದವು.

**ಶಿಕ್ಷಣ**

**ಗೊರ್ಟಾ ಬಿ** ಗ್ರಾಮವು ಐತಿಹಾಸಿಕ ಶಿಕ್ಷಣ ವ್ಯವಸ್ಥೆಯನ್ನು ಹೊಂದಿದ್ದು ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಗೋರ್ಟಾದಲ್ಲಿ ಸಂಗೀತ ವಿಶ್ವವಿದ್ಯಾಲಯವಿದ್ದು ಅದರ ಕುಲಪತಿ ಭಾಸ್ಕರ ಭಟ್, ಎನ್ನುವರು ಇದ್ದರು.ಆ ಸಮಯದಲ್ಲಿ ವಿಶ್ವಿವಿದ್ಯಾಲಯದಲ್ಲಿ ಹೋಗಲು 700 ವಿದ್ಯಾರ್ಥಿಗಳು ಮತ್ತು 70ಜನ ವಿದ್ವಾಂಸ ಉಪನ್ಯಾಸಕರು ವಿಶ್ವವಿದ್ಯಾಲಯ ನಡೆಸುತ್ತಿದ್ದರು. ಆ ಸಂಗೀತ ವಿಶ್ವವಿದ್ಯಾಲಯದಲ್ಲಿ ಚಾಲುಕ್ಯರ ಕೇತಾಲಾದೇವಿ ಮತ್ತು ಚೆಂದಲಾ ದೇವಿ ನೃತ್ಯ ಮಾಡುತ್ತಿದ್ದರು. ಈ ಒಂದು ಶಿಕ್ಷಣ ಪದ್ಧತಿ ಐತಿಹಾಸಿಕವಾಗಿ ಆಗಿನ ಕಾಲದಲ್ಲಿ ಪ್ರಸಿದ್ದಿ ಪಡೆದಿತ್ತು. ಆದರೆ ಇಗಿನ ಆಧುನಿಕ ಶಿಕ್ಷಣ ವ್ಯವಸ್ಥೆಯಲ್ಲಿ ಗೋರ್ಟಾ ಗ್ರಾಮದಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಿದ್ದು ಅವು ತಮ್ಮದೆ ಆದ ಪಾತ್ರವನ್ನು ನಿರ್ವಹಿಸುತ್ತ ಬರುತ್ತಿವೆ.

**ಜಾತಿವಾರು ಮನೆಗಳ ವಿಂಗಡನೆ :–**

ಗೋರ್ಟಾ ಬಿ ಗ್ರಾಮದ ದುರ್ಘಟನೆ ನಡೆಯುವ ಸಮಯದಲ್ಲಿ 2500 ಜನಸಂಖ್ಯೆ ಇದ್ದು 400 ಮನೆಗಳನ್ನು ಹೊಂದಿದ್ದು ಎಲ್ಲಾ ಮನೆಗಳು ಮತ್ತು ಜನರು ರಜಾಕರರ ಹಾವಳಿಯಿಂದ ತತ್ತರಿಸಿ ಗೋರ್ಟಾ ಗ್ರಾಮ ಸಂಪೂರ್ಣ ಹಾಳಾಗಿತ್ತು. ಆದರೆ ಇತ್ತಿಚಿನ ಬೆಳವಣಿಗೆಯಿಂದ ಮತ್ತು ಅಲ್ಲಿನ

ಹೇಳಿಕೆ ಪ್ರಕಾರ ಜಾತವಾರು ಮನೆಗಳು ಈ ಕೆಳಗಿನಂತಿವೆ.

| **ಜಾತಿಗಳು** | **ಮನೆಗಳು** |
| --- | --- |
| ಲಿಂಗಾಯತ | 500 |
| ಪರಿಶಿಷ್ಟ ಜಾತಿ | 150 |
| ಪ.ಪಂಗಡ | 50 |
| ಕುರುಬ | 50 |
| ಕಬ್ಬಲಿಗ | 50 |
| ಇನ್ನಿತರು | 50 |

**ದೇವಸ್ಥಾನಗಳು:–**

1) ಗೋರಕ್ಷನಾಥ ಗ್ರಾಮ ದೈವ.
2) ಮಹಾದೇವನ ದೇವಸ್ಥಾನ
3) ಹನುಮಾನ ದೇವಸ್ಥಾನ
4) ಲಕ್ಷ್ಮಿ ದೇವಸ್ಥಾನ
5) ನಗರೇಶ್ವರ ದೇವಸ್ಥಾನ
6) ಬಸವ ಮಂಟಪದ ನಿರ್ಮಾಣ
7) ಮೌನೇಶ್ವರ ದೇವಸ್ಥಾನ
8) ಕಡಲಿಬೇಳೆ ಮಹಾದೇವನ ದೇವಸ್ಥಾನ
9) ಕುಂಬೇಶ್ವರ ದೇವಸ್ಥಾನ
10) ರುದ್ರೇಶ್ವರ ದೇವಸ್ಥಾನ
11) ಮಲ್ಲೇಶ್ವರ ದೇವಸ್ಥಾನ
12) ಸಂಕೇಶ್ವರ ದೇವಸ್ಥಾನ

**ತಾಲುಕಾ ಕೇಂದ್ರದಿಂದ ಗೋರ್ಟಾ ದೂರ**

ಬೀದರ ಜಿಲ್ಲೆಯ ಬಸವಕಲ್ಯಾಣ ತಾಲೂಕಿನಲ್ಲಿ ಹೊಂದಿರುವ ಗೊರ್ಟಾ ಎನ್ನುವಂತಹ ಗ್ರಾಮವು ಬಸವಕಲ್ಯಾಣದಿಂದ ಈ ಗ್ರಾಮವು 18 ಕೀಮಿ ದೂರವನ್ನು ಹೊಂದಿದೆ. ಈ ಗೋರ್ಟಾಕ್ಕೆ ಹೋಗಲು ಭಾಲ್ಕಿ ರಸ್ತೆಯ ಮಧ್ಯೆದಲ್ಲಿ ಈ ಒಂದು ಗ್ರಾಮವು ಬರುತ್ತದೆ.ಈ ಗ್ರಾಮಕ್ಕೆ ಹೋಗಲು ಹಲವಾರು ವಾಹನಗಳ ವ್ಯವಸ್ಥೆ ಇದೆ.ಈ ಊರಿಸಿ ಘಟನೆ ಎಲ್ಲರಿಗೂ ಒಂದು ಆಶ್ಚಯಕರ ಘಟನೆಯೆಂದು ತಿಳಿದು ಕೊಂಡಿದ್ದಾರೆ.

**ಗೊಟಾ ಬಿ. ಗ್ರಾಮದಲ್ಲಿಯ ಮನೆತನಗಳು ಇಂತಿವೆ.:–**

| | | | |
|---|---|---|---|
| ಮಾಲೀಗೌಡರು, | *ಹೆತ್ತ | ಸಜ್ಜನಶೆಟ್ಟಿ | ಬುಡಬುಡಕ |
| ಗೌಡನವರು | ಮಮ್ಮಾ | ಕಣಜೆ | ಮಾದಿಗ |
| ಪಟ್ನೆ | ಭಾಲ್ಕೆ | ಮಾಶೆಟ್ಟಿ | ಮಸಲದಾರ |
| ರಾಜೋಳೆ | ವಡಮುಗರೆ | ಹುಣಚೆ | ಮಾದಿಗ |
| ಕೋಣೆ | ಅಕ್ಕಣ್ಣ | ಚಿದ್ರೆ | ಶಾಹಪಟೇಲ |
| ಜಗಶೇಟ್ಟಿ | ವರವಟ್ಟೆ | ಚವಳೆ | ಹಡಪದ |
| ರಾಜೇಶ್ವರೆ. | ಕಲ್ಯಾಣೆ | ಚಿಮ್ಮಾ | ಮುಕ್ತೆದಾರರು |
| ಕನಕಟ್ಟೆ | ಯರನಳ್ಳಿ | ರಟಕಲ್ಲೆ | ಅಕ್ಕಸಾಲಿಗ |
| ಗೌರೆ, | ಬೊಂದೆ | ಮಹೇಶ್ವರ | ಇಳಿಗರು |
| ಮಯಿನಳ್ಳೆ | ನೂರಂದೆ | ಸಿದ್ದಯ್ಯನ ಮಠ | ಕುರುಬ |
| ಚುಕುತರೆ | ಇಂದ್ರಾಳೆ | ದುಬಲಗುಂಡೆ | ಹಲಗೆ |
| ಡೊಣಗಾಪುರೆ | ಹಿರೇಮಠ | ಬ್ರಾಹ್ಮಣ | ಠಾಕುರ |
| ಅಂಬಿಸಿಂಗ | ದೇಶಮುಖರು | ಕುಲಕುಂಠೆ | ಮುಲ್ಲಾ |
| ಯರಬಾಗೆ | ಪಾಂಚಾಳ | ಭವಟೆ | ಮುಜುಕರಿ |
| ಮಠ | | | |
| ಮಠಪತಿ | ಡುಮಣೆ | ಬಡಿಗ | |

| | | |
|---|---|---|
| ವಿರಕ್ತಮಠ | ಗೋರು ಪಾಟೀಲ್ ಕಬ್ಬಲಿಗ | |
| ತುಡುಳಗೆ | ಹೀರೆದೊಡ್ಡಿ | ಹರಿಜನ |
| ಬಿರಾದಾರ | ಭೂಸಡ್ಡೆ | ಪಿಂಜಾರ |
| ಪೋಲಸಗೌಡರು | ಮಿರಿಗಳ್ಳ | ಫಕೀರ |
| ಪತಂಗೆ | | ಕಮ್ಮಾರ |

ಹೀಗೆ ಹಲವಾರು ಜಾತಿ ಪಂಥದವರು ಇದ್ದರು ಸಹ ಎಲ್ಲರು ಕೂಡಿ ಯಾವುದೆ ಸಾರ್ವತ್ರಿಕ ಕೆಲಸವಿದ್ದಾಗ ಬಂದುಗುಡಿಯೇ ಕೆಲಸ ಮಾಡುತ್ತಿದ್ದುರು. ಗ್ರಾಮದಲ್ಲಿ ಎರಡು ಗಲ್ಲಿಗಳು.

ಮೇಲಿನಗಲ್ಲಿ ಕೆಳಗಿನಗಲ್ಲಿ ಎಂದು ಎರಡು ಭಾಗವಾಗಿತ್ತು. ಪೋಲಿಸಗೌಡರು ಮೇಲಿನ ಗಲ್ಲಿಯವರಾಗಿದ್ದರು. ಇವರನ್ನು ಒಳಗೊಂಡು ಅರ್ಧ ಬಾಗ ಊರು ಹಾಗು ತೆಲಂಗ ಕಬ್ಬಲಿಗ್ಗರು, ಮುಸಲ್ಮಾನರು, ಎಲ್ಲರು ಒಂದೆ ಕಡೆ ಇದ್ದರು. ಇನ್ನು ಕೆಳಗಿನ ಗಲ್ಲಿಯವರು ಮಾಲಿಗೌಡರನ್ನು ಒಳಗೊಂಡ ಭಾಗದವರು. ಇನ್ನು ಜಂಗಮ ಮಹೇಶ್ವರರಲ್ಲಿ ಮೇಲಿನಗಲ್ಲಿ ಮಠಪತಿ ಕೆಳಗಿನಗಲ್ಲಿ ಮಠಪತಿ ಪಟವಾದಿಯವರು, ಬೆಂಗನ ಮಠರರವರು ಕೆಳಗಿನ ಏಕಲಿಂಗನವರು ಈ ಪ್ರಕಾರವನ್ನು ಒಳಗೊಂಡಿದೆ.

**ಐತಿಹಾಸಿಕ ಹಿನ್ನೆಲೆ**

12ನೇ ಶತಮಾನದಲ್ಲಿ ಕಲ್ಯಾಣವನ್ನು ಚಾಲುಕ್ಯರು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು ಅವರ ಆಳ್ವಿಕೆ ಸಮಯದಲ್ಲಿ ವಚನ ಸಾಹಿತ್ಯದ ಪ್ರಭಾವನ್ನು ಬಸವಣ್ಣನವರ ನೆತ್ರತ್ವದಲ್ಲಿ ವಚನ ಸಾಹಿತ್ಯಕ್ಕೆ ತನ್ನದೆ ಆದ ಕೊಡುಗೆಯನ್ನು ನಿಡಿದರು ಈ ವಚನ ಸಾಹಿತ್ಯದಿಂದ ಜನರಿಗೆ ಬದುಕಿನ ಜೀವಾಳ ಸ್ವರ್ಗ ನರಕ ಸುಖ ದುಖಗಳ ಬಗ್ಗೆ ತಮ್ಮ ವಚನಗಳಿಂದ ತಿಳಿಸುತ್ತಿದ್ದರು ಇಂತಹ ಒಂದು ಕಲ್ಯಾಣ ನಾಡಿನಲ್ಲಿ ಬೆಳೆದ ಈ ಸಾಮ್ರಜ್ಯ ತನ್ನದೆ ಆದ ಕಲೆ ಸಂಸ್ಕೃತಿ ಸಂಗೀತ ನೃತ್ಯ ಇನ್ನಿತರ ಅಂಶಗಳ ಮುಲಕ ಆಳ್ವೀಕೆ ಮಾಡುತ್ತಿದ್ದುರು ಆ ಸಮಯದಲ್ಲಿ ಬಸವಣ್ಣನವರು ಬಿಜ್ಜಳನ ಆಸ್ಥಾನದಲ್ಲಿ ಮಂತ್ರೀ ಪದವಿ ಪಡೆದು ತನ್ನದೆ ಆದ ಅಮುಲ್ಯ ಕಾಣಿಕೆಯನ್ನು ಕೊಟ್ಟಿದ್ದಾರೆ ಇಂತಹ ಒಂದು ಪೂಣ್ಯ ಭೂಮಿಯಲ್ಲಿ ಗೋರ್ಟಾ ಎನ್ನುವಂತಹ ಗ್ರಾಮ ರಾರಜಿಸುತ್ತಿತ್ತು. ಈ ಗ್ರಾಮ ಹಿಂದಿನ ಕಾಲದಲ್ಲಿ ಚಾಲುಕ್ಯ ಅರಸರ ಸಂಸ್ಕೃತಿಕ ರಾಜದಾನಿ ಎಂದು ಹೆಸರು ಪಡೆದಿದ್ದು ಇದನ್ನು

ಶಾಸನಗಳಲ್ಲಿ ಅಗ್ರಹಾರ ಗೊರಂಟಿ ಎಂದು ಕರೆಯಲಾಗುತ್ತಿತ್ತು. ಇಂತಹ ಗ್ರಾಮದಲ್ಲಿ ಸಂಗೀತದ ವಿಶ್ವವಿದ್ಯಾಲಯುವನ್ನು ಸ್ಥಾಪಿಸಿದ್ದ ಕಲ್ಯಾಣದ ಚಾಲುಕ್ಯರು ಸಂಗೀತದ ಬಗ್ಗೆ ವಿಷಯವನ್ನು ತಿಳಿಸುಕೊಡುತ್ತಿದ್ದು ಅಲ್ಲಿ ವಿಕ್ರಮಾದಿತ್ಯನ ಚಂದಲಾದೇವಿ ಅಥವಾ ಚೆಂದ್ರಲೇಖೆ ನೃತ್ಯ ಮಾಡಿದ್ದು ಇತಿಹಾಸದ ಪುಸ್ತಕದಲ್ಲಿ ಅದರ ಬಗ್ಗೆ ಉಲ್ಲೇಖ ಇರುವದು ಐತಿಹಾಸಿಕವಾಗಿ ಕಾಣಬಹುದು.

ಆಗಿನ ಕಾಲದ ಈ ವಿಶ್ವವಿದ್ಯಾಲಯ ಜನತೆಗೆ ಶಿಕ್ಷಣವನ್ನು ಕೊಟ್ಟು ಕಲ್ಯಾಣನಾಡಿನಲ್ಲಿ ನೃತ್ಯ ಸಂಗೀತ ಇನ್ನಿತರ ವಿಷಯಗಳನ್ನು ಆಗಿನ ಕಾಲದ ಕಲ್ಯಾಣದ ಚಾಲುಕ್ಯರು ತಮ್ಮ ಸಾಮ್ರಾಜ್ಯದ ಮುಲಕ ಒಳ್ಳೆಯ ಕೆಲಸ ಕಾರ್ಯಗಳನ್ನು ಮಾಡಿದರು ಇದರಿಂದ ಈ ಕಲ್ಯಾಣ ಒಂದು ವಚನ ಸಾಹಿತ್ಯದ ನಾಡುಆಗಿ ಬೆಳೆಯಲು ಕಾರಣವಾಯಿತು.

ಮುಂದೆ ಬ್ರೀಟಿಷರು ಭಾರತಕ್ಕೆ ಬಂದು ಬಿಟ್ಟು ಹೋದ ನಂತರ ಮುರು ಸಂಸ್ಥಾನಗಳು ವಿಲಿನವಾಗಿರಲಿಲ್ಲ ಅದರಲ್ಲಿ ಹೈದ್ರಾಬಾದ ಸಂಸ್ಥಾನ ಒಂದು ಈ ಹೈದ್ರಾಬಾದ ಸಂಸ್ಥಾನದ ರಜಕಾರರ ಹಾವಳಿಯಿಂದ ಪೂರ್ಣ ಹೈದ್ರಾಬಾದ ಕರ್ನಾಟಕ ತತ್ತರಿಸಿತು. ಅದರಲ್ಲಿ ಬಿದರ ಜಿಲ್ಲೆಯ ಬಸವಕಲ್ಯಾಣ ತಾಲುಕಿನ ಈ ಗೋರ್ಟಾ ಗ್ರಾಮದಲ್ಲಿ ರಜಾಕಾರರ ಹಾವಳಿಯಿಂದ ಸಂಪೂರ್ಣವಾಗಿ ನಾಶಗೊಂಡು ಆಗಿನ ಜನತೆಗೆ ನಿಟ್ಟುಸಿರು ಬಿಡದಂತಾಗಿತ್ತು. ಹೀಗಾಗಿ ಇಂತಹ ಒಂದು ದುರ್ಘಟನೆ ಈಗಿನ ಜನತೆಗೆ ಐತಿಹಾಸಿಕ ಗ್ರಾಮವನ್ನಾಗಿ ಮತ್ತು ಐತಿಹಾಸಿಕ ವಿಷವನ್ನಾಗಿ ಪರಿಗಣಿಸಬೇಕು ಎಂದು ಹೇಳಬಹುದು.

# ಅಧ್ಯಾಯ–3

## ಗೋರ್ಟಾ ಜನರಲ್ಲಿ ರಾಷ್ಟ್ರೀಯತೆ ಮೂಡಲು ಕಾರಣಗಳು.

ರಾಷ್ಟ್ರೀಯತೆ ಎಂಬ ಪರಿಕಲ್ಪನೆಯ ಜನಾಂಗಿಯ ರಕ್ತ ಸಂಭಂಧದ ಅಥವಾ ಹುಟ್ಟಿನಿಂದ ಬಂದ ಸಂಬಂಧದ ಅರ್ಥವನ್ನು ಪಡೆದಿದೆ. ಮೊದಲನೆಯದಾಗಿ ರಾಷ್ಟ್ರೀಯತೆಯು ಒಂದು ಭಾವನಾತ್ಮಕ ಗುಣವಾಗಿದೆ. ಐಕ್ಯತೆಯು ಒಂದಾಗುವಿಕೆಯ ಭಾವನಾತ್ಮಕ ಗುಣವೇ ರಾಷ್ಟ್ರಿಯತೆ. ತಮ್ಮ ಜನಾಂಗ , ತಮ್ಮ ಧರ್ಮ, ಭಾಷೆ, ಸಂಸ್ಕೃತಿ, ರಾಜ್ಯ ಹಾಗೂ ತನ್ನ ಮಾತೃಭೂಮಿಯನ್ನು ಪ್ರೀತಿಸುವದು ಒಂದು ಅತ್ಯಂತ ಸಹಜ ಭಾವನೆಯಾಗಿದೆ.ಜನನಿ ಜನ್ಮಭೂಮಿಶ್ಚ ಸ್ವರ್ಗದಾಪಿ ಗರಿಯಸಿ ಎಂಬ ಸಂಸ್ಕ್ರತ ಸುಭಾಷಿತ ಒಂದು ತಿಳಿಸುವಂತೆ ತಾಯಿ ಮತ್ತು ನಾಡು ಸ್ವರ್ಗಕ್ಕಿಂತ.ವೈಭವಪೂರಿತವಾದದ್ದು.[೧]

**1) ಆರ್ಯ ಸಮಾಜದ ಪ್ರಭಾವ:–**

1875ರಲ್ಲಿ ಸ್ವಾಮಿ ದಯಾನಂದ ಸರಸ್ವತಿಯವರಿಂದ ಪ್ರಾರಂಭಿಸಲ್ಪಟ್ಟ ಈ ಸಮಾಜ ನಿಜಾಮನ ಅಧಿಪತ್ಯದಲ್ಲಿ ಧರ್ಮದ ಪತಾಕೆ ಹಿಡಿದು ಸಾಮಾಜಿಕ ರಾಜಕೀಯ, ಪುನರುಜ್ಜಾರವನ್ನು ಸಂಘಟಿಸಿ ಚಳುವಳಿಯನ್ನು ಚಾಲನ ಶಕ್ತಿಯಾಗಿ ಕಾರ್ಯನಿರ್ವಹಿಸಿತು. ಹೈದ್ರಾಬಾದ ಸಂಸ್ಥಾನದಲ್ಲಿ ಆರ್ಯ ಸಮಾಜ ಚಳುವಳಿಯ ರಾಜಕೀಯ ಸ್ವರೂಪವನ್ನು ಪಡೆದುಕೊಂಡಿತು.ಬಹುಸಂಖ್ಯಾತ ಹಿಂದೂಗಳ ಮೇಲೆ ಅಲ್ಪಸಂಖ್ಯಾತ ಮುಸ್ಲಿಮರು ಆಡಳಿತವನ್ನು ಹೇರಿದ್ದೆ ಹೈದ್ರಾಬಾದ ಸಂಸ್ಥಾನದಲ್ಲಿ ಬಹುಮಟ್ಟ ರಾಜಕೀಯ ಸಮಸ್ಯೆಯಾಗಿತ್ತು. ಈ ಒಂದು ಸಮಸ್ಯೆಯು ಮುಂದೆ ಬೀದರ ಜಿಲ್ಲೆಯ ಬಸವಕಲ್ಯಾಣ ತಾಲುಕಿನ ಗೊರ್ಟಾ ಬಿ ಜನತೆಯು ಪ್ರಭಾವಿತರಾಗಿ ರಜಾಕರರ ವಿರುಧ್ಧ ಹೋರಾಡಲು ಮುಂದಾದರು. ಈ ರೀತಿಯಾಗಿ ಗೋರ್ಟಾದ ಜನತೆಗೆ ಆರ್ಯ ಸಮಾಜದ ಪ್ರಭಾವವು ಅವರಿಗೆ ಹೋರಾಟದ ಸ್ಪರ್ತಿಯಾಗಿದೆ ಎಂದು ಹೇಳಬಹುದು

2) **ರಮಾನಂದ ತೀರ್ಥರು:-**

ಹೈದ್ರಾಬಾದ ಸಂಘರ್ಷದ ಮಹಾತ್ಮಾಗಾಂಧಿ ಎಂದು ಸ್ವಾಮಿ ರಮಾನಂದ ತಿರ್ಥರವರನ್ನು ಕರೆದಿರುವರು. ಸೂಕ್ತ ಯಾಕೆಂದರೆ ಗುಲ್ಬರ್ಗಾ ಜಿಲ್ಲೆಯ ಚಿಂಚೋಳಿ ತಾಲುಕಿನವರಾಗಿರುವ ಇವರು ರಾಜಕೀಯದ ಆದ್ಯತ್ಮಿಕತೆಗಳ ಸುಂದರ ಸಂಗಮವಾಗಿದ್ದರು. ಹೈದ್ರಾಬಾದ ಸಂಸ್ಥಾನವನ್ನು ವಿಸರ್ಜಿಸಿ ಭಾರತ ಗಣರಾಜ್ಯದಲ್ಲಿ ವಿಲಿನಗೊಳಿಸುವ ಹಾಗು ವಿಮೋಚನೆಗೊಳಿಸುವ ಅವರ ಪಾತ್ರ ಬಹಳ ಮಹತ್ವವಾಗಿದೆ. ಈ ರೀತಿಯಾಗಿ ಈ ವ್ಯಕ್ತಿತ್ವವನ್ನು ಹೊಂದಿರುವ ಇವರು ಬಂದು ಪಾತ್ರ ಮುಂದೆ ರಜಾಕರರ ವಿರುದ್ಧ ಹೋರಾಡಲು ಗೊರ್ಟಾ ಜನತೆಗೆ ಪ್ರೇರಣೆಯಾಗಿದೆ.

3) **ತಿಲಕರ ಪ್ರಭಾವ**

ತೀಲಕರು ರಾಷ್ಟ್ರೀಯತೆಯು ದೀಕ್ಷೆಕೊಟ್ಟು ರಾಷ್ಟ್ರೀಯವಾದಿಗಳ ದೊಡ್ಡ ಪ್ರಮಾಣದಲ್ಲಿ ಭಾಗವಹಿಸಿದ್ದರಲ್ಲದೆ ಗಾಂಧಿಜಿಯವರ ಚಳುವಳಿಯು ಯಶಸ್ವಿಯಾಯಿತು ಎಂಬ ಅಂಶವನ್ನು ಮರೆಯಬಾರದು ಹೈ-ಕರ್ನಾಟಕವು ಜನತೆಗೆ ಯುವಕರ ಮೇಲೆ ಲೋಕಮಾನ್ಯ ತೀಲಕರು ನೀಡಿದ್ದ ಮಂತ್ರ ಸ್ವರಾಜ್ಯವೆ ನನ್ನ ಜನ್ಮಸಿದ್ದ ಹಕ್ಕು! ಅದನ್ನು ನಾನು ಪಡೆದೇ ಪಡೆಯುತ್ತೇನೆ."[3] ಎಂಬ ಮಾತು ತಿವ್ರ ರೀತಿಯಲ್ಲಿ ಪ್ರಭಾವವನ್ನು ಬೀರಿತು" 4 ಬೀದರ, ಕುಶನೂರ, ಆಳಂದ , ರಾಯಚೂರ, ಹುಮನಾಬಾದ, ಮತ್ತು ಗುಲ್ಬರ್ಗಾದ ಮುಂತಾದ ಕಡೆಗೆ 1935-1945' ರವರೆಗೆ ನಡೆದ ಹಿಂದೂ-ಮುಸ್ಲಿಂ ಗಲಭೆ ಕಾಲದಲ್ಲಿ ಧಾರ್ಮಿಕ ಭಾವನೆಯನ್ನು ಮತ್ತು ಸ್ವಾಭಿಮಾನವನ್ನು ರಕ್ಷಿಸಿಕೊಳ್ಳಲು ಕನ್ನಡಿಗರಿಗೆ ಇದ್ದ ವೇಗವೆಂದರೆ ತೀಲಕರ ಬೋಧನೆಯಾಗಿತ್ತು. ಈ ರೀತಿಯಾಗಿ ಈ ಹೋರಾಟಗಾರನ ಭಾವನೆ ಮುಂದೆ ರಜಾಕರರ ವಿರುದ್ದ ಹೋರಾಡಲು ಗೊರ್ಟಾ ಜನತೆಗೆ ಬಂದು ಪ್ರಮುಖ ಪ್ರೇರಣೆಯಾಯಿತು. ಈ ಪ್ರೇರಣೆ ಗೋರ್ಟಾ ಜನರನ್ನು ಮುಸ್ಲಿಂರ ವಿರಧ್ದ ಹೋರಾಡಲು ಸಾಧ್ಯವಾಯಿತು.

4) **ಹರ್ಡೆಕರ ಮಂಜಪ್ಪ:-**

ಕರ್ನಾಟಕದ ಗಾಂಧಿ:- ಎಂದು ಹೆಸರಾಗಿರುವ ಹರ್ಡೆಕರ ಮಂಜಪ್ಪನವರ ವಿಚಾರಗಳಿಂದ ಈ ಭಾಗದ ಜನರ ರಾಜಕೀಯ ಸಾಮಾಜಿಕ, ಧಾರ್ಮಿಕ, ಭಾವನೆಗಳನ್ನು, ತಿವ್ರರಿತಿಯಲ್ಲಿ ಪ್ರಭಾವಿತಗೊಂಡರು ನಿಜಾಂನ ಸಂಸ್ಥಾನದ ವೀರಶೈವ ಪರಿಷತ ಸಂಘಟಿಸುವ ಯಾವುದೇ ಕಾರ್ಯವನ್ನು ಅವರು ತಟ್ಟಿಸುತಿರಿಲ್ಲಿಲ್ಲ ಮತ್ತು ಇವರ ಸಂದೇಶ ನಿಜಾಂನ ಸಂಸ್ಥಾನದ ಕೋಮುಶಕ್ತಿ

ವಿರುಧ್ಧ ನಿರ್ಣಾಯಕ ಹೋರಾಟ ಮಾಡುವಂತೆ ನೀಡಿದ ದೈವವಾಶಿಯಿಂದ ಜನರಲ್ಲಿ ಇವರು ಹೇಳಿರುವಂತಹ ಭಾವನೆಗಳು ಮುಂದೆ ಬಸವಕಲ್ಯಾಣದ ಗೋರ್ಟಾ ಬಿ ಜನತೆಗೆ ಋಣಿಯಾಗಿದೆ. ಅವರು ರಜಾಕರರ ವಿರಧ್ಧ ಹೊರಾಡಿದರು ಎಂದು ಹೇಳಬಹುದು.

**5) ನಿಜಾಂ ಕರ್ನಾಟಕ ಪರಿಷತ್ತು**

ಹೈದ್ರಾಬಾದ ಸಂಸ್ಥಾನದಲ್ಲಿದ ಕನ್ನಡಿಗರು ಪ್ರಾರಂಭದಿಂದಲು ಸಾಹಿತ್ಯಕ್ಕೆ ಚಟುವಟಿಕೆಯ ಬಗ್ಗೆ ಆಸಕ್ತಿಯನ್ನು ವಹಿಸುತ್ತಿದ್ದರು. ಈ ನಿಜಾಂ ಕರ್ನಾಟಕದ ಸಭೆಯನ್ನು ಮಾಡಿ ಹಲವಾರು ಪ್ರಚೋದನಕಾರಿ ಲೇಖನಗಳನ್ನು ಬರೆಯಲಾಯಿತು. ಅದೇ ರೀತಿ ಹಿಂದೂ-ಮುಸ್ಲಿಮ್ಮರಿಗೆ 50:50 ಅನುಪಾತದಲ್ಲಿ ಪ್ರತಿನಿಧಿರುವ ಜನಪ್ರೀಯ ಅಸೆಂಬ್ಲಿ ಸ್ಥಾಪಿಸುವ ನಿಜಾಮನ ಸಲಹೆಯನ್ನು ತಿರಸ್ಕರಿಸುವ ನಿರ್ಣಯವನ್ನು ಪರಿಷತ್ತು. ಸ್ವೀಕರಿಸಿತು[8] ಮುಂದೆ ಬಿದರಿನಲ್ಲಿ ನಡೆದಿರುವ ಅಧಿವೇಶನಕ್ಕೆ ಭಾಲ್ಕಿಯ ಚೆನ್ನಬಸವ ಪಟ್ಟದೇವರು ಅಪ್ಪರಾವ, ಪ್ರಭುರಾವ, ಕಂಬ್ಳಿವಾಲ್. ಮತ್ತು ರಂಗನಾಥರಾವ ಸಾಯಿಗಾಂವಕರ, ಮತ್ತು ನ್ಯಾಯವಾದಿ ಬಸವಚಿತರಾವ ಶ್ರಮಿಸಿದರು ಈ ಎಲ್ಲಾ ವಿಷಯಗಳಿಂದ ನಿಜಾಂ-ಕರ್ನಾಟಕ ಪರಷ್ಯತ ಪ್ರಭಾವ ಗೋರ್ಟಾ ಜನತೆಯ ಮೇಲೆ ಬಿದ್ದು ಈ ದುರಂತದ ವಿರುದ್ಧ ಹೋರಾಡಲು ಮುಂದಾದರು.

**6) ಪಂಡಿತ ತಾರಾನಾಥರ ಪ್ರಭಾವ**

1891 ರಲ್ಲಿ ಮಂಗಳೂರಿನಲ್ಲಿ ಜನಿಸಿದ ಪಂಡಿತ ತಾರನಾಥರು ಕರ್ನಾಟಕದ ಕ್ರಾತಿಕಾರಿ ಪುತ್ರರಲ್ಲಿ ಒಬ್ಬರಾಗಿದ್ದರು. ಅವರು ತಮ್ಮ ಜೀವಿತ ಕಾಲದಲ್ಲಿ ಓರ್ವ ಐತಿಹ್ಯರಾಗಿದ್ದು ಮುಂದೆ ಇವರು ಬೀದರನಲ್ಲಿ ಉಪಾಧ್ಯಾಯರಾಗಿ ತಮ್ಮ ಸೇವೆಯನ್ನು ಪ್ರಾರಂಭಿಸಿ ಇವರು ತಮ್ಮ ಭಾಷಣ. ಉದ್ರೇಕಕಾರಿ ಲೇಖನಗಳ ಮೂಲಕ ನಿಜಾಂ ದೌರ್ಜನ್ಯದ ವಿರುದ್ದ ತಲೆ ಎತ್ತದಂತ ಹೋರಾಡುತ್ತಿದ್ದರು ಈ ರೀತಿಯಾಗಿ ಪಂಡಿತ ತಾರಾನಾಥರು ನಿಜಾಂನ ವಿರುದ್ದ ಬಂಡೇಳುವಂತೆ ಜನರಿಗೆ ಕರೆ ಕೊಟ್ಟರು. ಹೀಗಾಗಿ ಇಂತಹ ಮಹಾನ ವ್ಯಕ್ತಿಯ ಹೇಳಿಕಾಗಿ ಮುಲಕ ಜನರು ಉದ್ರೇಕರಾಗಿ ಗೊರ್ಟಾದಲ್ಲಿ ಹೋರಾಡಲು ಮುಂದಾಗಿ ರಜಾಕರರ ವಿರುದ್ದ ತಮ್ಮ ಹೋರಾಟದ ಮುಲಕ ಪ್ರಾಣವನ್ನೆ ಕೊಟ್ಟುರು ಎಂದು ಹೇಳಬಹುದು.

### 7) ಗ್ರಂಥಾಲಯ ಚಳುವಳಿ

ನಿಜಾಂ ರಾಷ್ಟ್ರೀಯ ವಿರೋಧಿ ಫರ್ಮಾನುಗಳನ್ನು ಜಾರಿಯಲ್ಲಿ ಬಂದರು ಸಹ ಶಾಲೆಗಳ ಚಟುವಟಿಕೆಗಳಲ್ಲಿ ರಾಷ್ಟ್ರೀಯವಾದಿ ಪತ್ರಿಕೆಗಳಲ್ಲಿ ಲಿಂಗಾಯತ ಮತ್ತು ಬ್ರಾಹ್ಮಣ ಸಮುದಾಯದಲ್ಲಿ ತಿವ್ರವಾಗಿ ಹರಡಿರುವದನ್ನು ದಿನಾಂಕ 1320 ಫಸಲಿಯಲ್ಲಿ ಪರಭರಣಿಯ ಜಿಲ್ಲಾ ಪೋಲಿಸ್ ವರಿಷ್ಠಾಧಿಕಾರಿ ವರದಿಯಿಂದ ತಿಳಿದುಬರುತ್ತದೆ.* ಹೀಗಾಗಿ ಗ್ರಂಥಾಲಯ ಚಳುವಳಿಯಲ್ಲಿ 1932 ರಲ್ಲಿ ನ್ಯಾಯವಾದಿ ಉದಯಭಾನು ಮತ್ತು ಗೋಪಾಲದೇವ ಶಾಸ್ತ್ರಿ ಬಸವಕಲ್ಯಾಣದಲ್ಲಿ ಆರ್ಯ ಸಮಾಜದ ಗ್ರಂಥಾಲಯವನ್ನು ಸ್ಥಾಪಿಸಿದರು ಮುಂದೆ ಬಸವಕಲ್ಯಾಣದ "ವಾಣಿ" ಎನ್ನುವ ಪತ್ರೆಕೆಯ ಮೂಲಕ ಜನತೆಗೆ ಕ್ರಾತಿಕಾರಿ ಮನೋಭಾವನೆಗಳನ್ನು ಮೂಡಿಸಲು ಸಾಧ್ಯವಾಯಿತು ಈ ರೀತಿಯಾಗಿ ಈ ಚಳುವಳಿಗಳು ಗೋರ್ಟಾ ಹತ್ಯಾಕಾಂಡದ ಮೇಲೆ ಪ್ರಭಾವವನ್ನು ಬೀರಿದವು.

### 8) ಕಿರ್ತನಗೆಗಳ ಪ್ರಭಾವ

ಮಠಾದಿಪತಿಗಳು ಭಜನಾಮಂಡಳಿ ಕಾರ್ಯಕರ್ತರು ಹಾಗು ಕನ್ನಡ ಸಾಹಿತ್ಯ ಸಂಸ್ಕೃತಗಳು ಧಾರ್ಮಿಕರ ಸಮಾವೇಶಗಳಲ್ಲಿ ಹಬ್ಬ ಹರಿದಿನಗಳಲ್ಲಿ ಕಿರ್ತನೆಕಾರರಾದ ಜಯರಾಮಚಾರ್ಯ ಕಿರ್ತನೆಕೇಸರಿ ಬಿ ಶಿವಮೂರ್ತಿ ಶಾಸ್ತ್ರಿ ಪಂಡಿತ ಕಲ್ಲಿನಾಥ ಶಾಸ್ತ್ರೀಗಳನ್ನು ಅಹ್ವಾನಿಸಿ ಕಿರ್ತನೆ ಕಾರ್ಯಕ್ರಮಗಳನ್ನು ನಡೆಸುತ್ತಿದ್ದರು. ರಾಷ್ಟ್ರೀಯ ಚಳುವಳಿಯನ್ನು ಉಲ್ಲೇಖಿಸುವಲ್ಲಿ 1940ರಲ್ಲಿ ಬೀದರ ನಿಜಾಂ-ಕರ್ನಾಟಕ ಪರಿಷತ್ತಿನಲ್ಲಿ ಭಾಗವಹಿಸಿದರು ಈ ರೀತಿಯಾಗಿ ಇಂತಹ ಕಿರ್ತನೆಕಾರರು ತಮ್ಮ ಮನೋಭಾವವನ್ನು ಬೆಳೆಸುಕೊಂಡು ಜನತೆಗೆ ಒಳ್ಳೆಯ ಮಾರ್ಗದರ್ಶನ ಕೊಟ್ಟರು.

ಒಟ್ಟಾರೆಯಾಗಿ ರಾಷ್ಟ್ರೀಯತೆ ಪ್ರಭಾವವು ಎಲ್ಲಾ ಹೈ-ಕರ್ನಾಟಕದ ಜನತೆಗೆ ಒಳ್ಳೆಯ ರಾಷ್ಟ್ರೀಯತೆಯನ್ನು ಬೆಳೆಸಿ ರಜಾಕರರ ಮತ್ತು ನಿಜಾಂನ ವಿರುಧ್ದ ಹೋರಾಡಲು ಸ್ಪೃತಿಯನ್ನು ಕೊಟ್ಟಿದೆ ಎಂದು ಹೇಳಬಹುದು.

### ಗೋರ್ಟಾ ಹತ್ಯಾಕಾಂಡದ ಅಧ್ಯಯನದ ಮಹತ್ವ

ಬೀದರ ಜಿಲ್ಲೆಯ ಬಸವಕಲ್ಯಾಣ ತಾಲುಕಿನ ಗೋರ್ಟಾ ಹತ್ಯಾಕಾಂಡ ಒಂದು ಅಹಿತಕರ ಘಟನೆ.ತನ್ನದೆ ಆದ ಅಧ್ಯಯನದ ಮಹತ್ವವನ್ನು ಹೊಂದಿದೆ. ಅಧ್ಯಯನದ ಅಂಶಗಳನ್ನು ಈ ಕೆಳಗಿನಂತೆ ಕಾಣಬಹುದು.

**1 ಇತಿಹಾಸದ ಪುಟಗಳಲ್ಲಿ ರಾರಾಜಿಸುವ ಘಟನೆ:–**

ಗೋರ್ಟಾ ಹತ್ಯಾಕಾಂಡ ಇದು ಇತಿಹಾಸದ ಪುಟಕ್ಕೆ ಸೇರಬೇಕಾದಂತಹ ಒಂದು ಪ್ರಮುಖ ಘಟನೆ. ಯಾಂಕೆಂದರೆ ಹಿಂದಿನ ಇತಿಹಾಸ ಯುದ್ದಗಳು ರಾಜ ಮಹಾರಾಜರ ಕಥೆಗಳನ್ನು ಯಾವ ರೀತಿ ಅಧ್ಯಯನ ಮಾಡುತ್ತೇವೆಯೋ ಅದೇ ರೀತಿ ಹೈದ್ರಾಬಾದ ಕರ್ನಾಟಕದಲ್ಲಿ ಆಗಿರುವಂತಹ ಗೋರ್ಟಾ ಹತ್ಯಾಕಾಂಡ ಇದು ಇತಿಹಾಸದ ಪುಟವನ್ನು ಸೇರಬೇಕಾದ ಪ್ರಮುಖ ಘಟನೆ ಇದಾಗಿದೆ.ಈ ಘಟನೆಯಲ್ಲಿ ಯಾಗಿರುವಂತಹ ಜನರ ಮರಣಹೋಮವನ್ನು ಸ್ಪಷ್ಟವಾಗಿ ಚಿತ್ರಿಸುವದು ಬಹಳ ಅವಶ್ಯಕ ಇದರಿಂದ ಈ ಹತ್ಯಾಕಾಂಡ ಇತಿಹಾಸದ ಪುಟಕ್ಕೆ ಸೇರಬೇಕಾದಂತಹ ಪ್ರಮುಖವಾದ ಘಟನೆಯಾಗಿದೆ.

**2 ಐತಿಹಾಸಿಕ ಗ್ರಾಮ**

ಗೋರ್ಟಾ ಹತ್ಯಕಾಂಡದ ನಂತರ ಐತಿಹಾಸಿಕ ಗ್ರಾಮ ಗೋರ್ಟಾವಾಗಿ ಹೆಸರಿಟ್ಟಿತ್ತು. ಇದರಿಂದ ಗೋರ್ಟಾದ ಘಟನೆ ನಂತರ ಹಲವಾರು ಮಹತ್ವದ ಶಾಸನಗಳನ್ನು ದೇವಾಲಯಗಳನ್ನು ಮತ್ತು ಮಹಾದಪ್ಪ ಡುಮಣೆಯವರ ಮನೆಯನ್ನು ಮತ್ತು ಲಕ್ಷ್ಮಿ ಗುಡಿಯನ್ನು ಆಗಿರುವ ಘಟನೆಯನ್ನು ಕಂಡು ಐತಿಹಾಸಕ ಗ್ರಾಮವಾಗಿ ಹೆಸರಿಟ್ಟಿದೆ.ಯಾಕೆಂದರ ಘಟನೆಯ ಮಾಲಿಕ ಹಾನಿಯಾಗಿರುವಂತಹ ಗೋರ್ಟಾದ ವಿಕ್ಷಣೆ ಮಾಡಲು ಇದೊಂದು ಐತಿಹಾಸಿಕ ಗ್ರಾಮವನ್ನಾಗಿ ಮಾಡಲು ಮತ್ತು ಮಾಡಬೇಕೆಂದು ಮತ್ತು ಐತಿಹಾಸಿಕ ಸ್ಮಾರಕಗಳ ಬಗ್ಗೆ ತಿಳಿದುಕೊಳ್ಳುವದು ಅವಶ್ಯವಾಗಿದೆ.

**3 ಗ್ರಾಮದ ಮುಕ್ತಿಗಾಗಿ ಹೋರಾಡಿದ ವೀರಪುರಷರ ಜೀವನಗಾಥೆ:–**

ರಜಾಕರರ ಹಾವಳಿಯ ಸಮಯದಲ್ಲಿ ಗೋರ್ಟಾದ ಘಟನೆಯು ಆ ಸಮಯದಲ್ಲಿ ಗೊರ್ಟಾದ ಜನತೆ ವೀರಾವೇಶದಿಂದ ಹೋರಾಡಿದರು. ಆದರೆ ರಜಾಕರರಲ್ಲಿ ಎಲ್ಲಾ ರೀತಿಯ ಶಸ್ತ್ರಾಸ್ತ್ರಗಳನ್ನು ಹೊಂದಿದ್ದರು ಆದರೆ ಎಲ್ಲಾ ಗ್ರಾಮದ ವೀರ ಪುರುಷರ ಡುಮಣೆ, ಬಸಪ್ಪ ಮಾಲಿಗ್ಗಡರು, ಇನ್ನಿತರ, ಪ್ರಮುಖ ಜನರು ವೀರಾವೇಶದಿಂದ ಹೋರಾಡಿ ಗೊರ್ಟಾ ಗ್ರಾಮದಿಂದ ಮುಕ್ತಿಗಾಗಿ ತಮ್ಮ ಪ್ರಾಣವನ್ನು ಕೊಟ್ಟರು. ಅವರನ್ನು ನೆನಪಿ ಗೊಸ್ಕರ ಅವರ ಸ್ಮಾರಕಗಳು ನಿವಾರಣೆ ಮಾಡಬೇಕು. ಅವರಿಗೆ ಅಥವಾ ಅವರ ಮನೆಯವರಿಗೆ ಎಲ್ಲಾ ರೀತಿಯ ಮನಸ್ಸಿಗೆ ಶಾಚಿತಿ ಸಿಗುತ್ತದೆ ಎಂದು ಹೇಳಬಹುದು.

**4 ಗೋರ್ಟಾದಲ್ಲಿ ಹಾಳಾದ ಅವಶೇಷಗಳ ಸ್ಪಷ ಚಿತ್ರಣ**

ರಜಾಕರರ ಹಾವಳಿಯಿಂದ ಹಾಳಾದ ಗೋರ್ಟಾದ ಗ್ರಾಮದ ಅವಶೇಷಗಳು ಸ್ಪಷ್ಟವಾದ ಚಿತ್ರಣವನ್ನು ಕೊಡುವದು ಅಧ್ಯಯನದ ಮಹತ್ವವಾಗಿದೆ ಎಂದು ಹೇಳಬಹುದು, ಇದ್ದರಿಂದ ಗೋರ್ಟಾದಲ್ಲಿ ಹಾಳಾಗಿರುವಂತಹ ಹಲವಾರು ಮನೆಗಳು ದೇವಸ್ತಾನಗಳು,ಸ್ಮಾರಕಗಳು,ಮತ್ತು ಪ್ರಮುಖವಾಗಿ ಮಹಾದಪ್ಪ ಮನೆಯವರ ಮನೆ ಬೃಹತ ಕೋಟೆ ಅದು ಗೋರಟಾ ಸು.800ಜನರನ್ನು ಆಶ್ರಯ ಕೊಟ್ಟಿರುವ ಮನೆ ಈ ಮನೆಯ ಇರದ್ದಿದರೇ ಗೋರಟಾದಲ್ಲಿ ವಾಸಿಸುಲು ನರಪಿಳಿಗೆಯು ಇರುತಿರಲಲ್ಲಿ ಇಂತಹ ಮನೆಯನ್ನು ರಚಾಗಿರರು ಮದ್ದುಗುಂಡುಗಳನ್ನು ಹಾರಿಸಿ ಆ ಮನೆಗೆ ಬೆಂಕಿಯನ್ನು ಹಚ್ಚಿದರು ಆದರೆ ಕೇಲವೊಂದು ಮಹತ್ವದ ಅವಶೇಷಗಳು ಹಾಳಾಗಿವೆ ಇದ್ದರಿಂದ ಆ ಮನೆಯನ್ನು ನೋಡಿದರೆ ಒಂದು ಬೃಹತ ಕೋಟೆಯಂತೆ ಇರುತ್ತದೆ.ಇದ್ದರಿಂದ ಗೋರಟಾ ಗ್ರಾಮದ ಸ್ವಷ್ಟ ಚಿತ್ರಣವನ್ನು ಕೊಡುವುದು ಬಹಳ ಮಹತ್ವದಾಗಿದೆ

**5 ರಜಾನಕಾರರ ಹಾವಳಿಯಲ್ಲಿ ಹೆಚ್ಚು ಹಾನಿಗೊಳಗಾದ ಗ್ರಾಮ**

ರಜಾನಕಾರರ ಹಾವಳಿಯಿಂದ ಬೀದರ ಜಿಲ್ಲೆಯ ಬಸವಕಲ್ಯಾಣ ತಾಲೂಕಿನ ಗೋರಟಾ ಎನ್ನುವ ಗ್ರಾಮ ಇದು ಅತ್ಯಂತ ಹೆಚ್ಚಿನ ಹಾನಿಗೆ ಒಳಗಾದ ಗ್ರಾಮ ಅತ್ಯಮತ ಇದಾಗಿದೆ ಎಂದು ಹೇಳಬಹುದು ಗೋರಟಾ ಅತ್ಯಮತ ಶ್ರೀಮಂತ ಗ್ರಾಮ ಅಲ್ಲಿ ಅಪಾರವಾದ ಸಂಪತ್ತು ಹೊಂದಿತ್ತು ಸುತ್ತಮುತ್ತ ಇರುವ ಹೊನ್ನಳ್ಳಿ,ಮುಚಳಂಬ,ಇನ್ನಿತರರು ಗ್ರಾಮಗಳನ್ನು ಹೊರತು ಪಡಿಸಿ ಗೋರಟಾ ಗ್ರಾಮದ ಮೇಲಿನ ಆಕ್ರಮಣ ಕಾರಕ ನೀತಿಯ ಮೂಲಕ ಆ ಗ್ರಾಮವು ಅತಿ ಹೆಚ್ಚಿನ ರೀತಿಯಲ್ಲಿ ಹಾನಿಗೆ ಒಳಗಾಗಿದೆ ಎಂದು ಹೇಳಬಹುದು ಸು 200ಕ್ಕೂ ಹೆಚ್ಚು ಜನರ ಕೊಲೆಯಾಗಿದ್ದರು ಅಪಾರ ಬಂಗಾರ,ಬೆಳ್ಳಿ ಇನ್ನಿತರ ಧಾನ್ಯಗಳನ್ನು ದೋಚಿಕೊಂಡು ವಿಚಿತ್ರಕಾರಕ ನೀತಿಯಿಂದ ನಡೆದುಕೋಡು ಹೀಗಾಗಿ ಆಗಿನ ಸರಕಾರ 70ಲಕ್ಷ ಹಣವನ್ನು ಭರಿಸುತ್ತೇವೆ ಎಂದು ಹೇಳಿದರು ಆದರೆ ಇನ್ನುವರೆಗೆ ಆ ಹಣ ಭರಿಸಲಾಗಲಿಲ್ಲ ಹೀಗಾಗಿ ಗೋರಟಾ ಗ್ರಾಮದ ಅತಿ ಹೆಚ್ಚು ಹಾಳಾಗಿದ್ದು ಮುಂದೆ ಇಂತಹ ಅಹಿತಕರ ಘಟನೆ ನಡೆಯದಂತೆ ನೋಡಿಕೊಂಡು ಹೋಗುವುದು ಬಹಳ ಅವ್ಯಶಕವಾಗಿದೆ,

**6 ಇಂತಹ ದುರ್ಘಟನೆ ಮರುಕಳಿಸದಂತೆ ಎಚ್ಚರಿಕೆ ವಹಿಸುವದು:-**

ಇದೊಂದು ದುರಂತ ಘಟನೆಯಾಗಿದ್ದು ಇಂತಹ ಘಟನೆ ಮುಂದೆ ಪುನ;ನಡೆಯದಂತೆ ಎಚ್ಚರಿಕೆ ವಹಿಸುವದು ಬಹಳ ಅವಶ್ಯಕವಾಗಿದೆ ಇದ್ದರಿಂದ ಗೋರಟಾದ ಘಟನೆಯು ಎಲ್ಲರ ಭಯವನ್ನು

ಹೆಚ್ಚಿಸಿತ್ತು ಆಗಿನ ಸಮಯದಲ್ಲಿ ಎಲ್ಲವೋ ಅಲ್ಲೋಲ ಕಲ್ಲೋಲವಾಗಿತು ಹೀಗಾಗಿ ಇಂತಹ ಒಂದು ದುರ್ಘಟನೆಯಿಂದ ಆಗಿನ ಆಗಿರುವ ಹಾನಿ ಮತ್ತು ಕೆಟ್ಟ ದೃಶ್ಯ ಮತ್ತೊಮ್ಮೆ ಮರುಕಳಿಸದಂತೆ ನೋಡಿಕೊಂಡು ಹೋಗುವುದು ಬಹಳ ಅವಶ್ಯಕವಾಗಿದೆ

**7 ಪಠ್ಯಪುಸ್ತಕದಲ್ಲಿ ಸೇರಬೇಕಾದ ಅತೀ ಅವಶ್ಯವಾದ ಘಟನೆ**

ಬೀದರ ಜೀಲ್ಲೆಯ ಬಸವಕಲ್ಯಾಣ ತಾಲೂಕಿನ ಗೋರಟಾ ಗ್ರಾಮದ ಈ ಘಟನೆ ಬಹಳ ದುರದೃಷ್ಟ ಈ ಘಟನೆಯಾಗಿದ್ದು ಇದು ರಜಾಕರರ ಹಾವಳಿಯಿಂದ ಹಾಳಾದ ಈ ಊರು ತನ್ನದೇ ಆದ ಅಸ್ತಿತ್ವವನ್ನು ಕಳೆದುಕೊಂಡಿತ್ತು ಆದರೆ ಇದು ಐತಿಹಾಸಿಕ ಗ್ರಾಮವಾಗಿ ಮೊಸಕಡಬೇಕು ಮತ್ತು ಪಠ್ಯಪುಸ್ತಕದಲ್ಲಿ ಸೇರಿಸಬೇಕಾದಂತಹ ಅತಿ ಅವಶ್ಯವಾದ ಘಟನೆಯಾಗಿದೆ ಹೀಗಾಗಿ ಈ ಗೋರಟಾ ಘಟನೆ ಎಲ್ಲರಿಗೂ ತಿಳಿಯ ಬೇಕಾದರೆ ಮತ್ತು ಹೈದರಬಾದ –ಕರ್ನಾಟಕದ ಜನತೆಗೆ ತಿಳಿಯಬೇಕಾದರೆ ಅದನ್ನು ಪಠ್ಯಪುಸ್ತಕದಲ್ಲಿ ಸೇರಸದರೆ ಅದರೆ ಬಗ್ಗೆ ಅಲ್ಲರಿಗೂ ತಿಳಿಸಲು ಬಹಳ ಸಹಾಯಕವಾಗುತ್ತದೆ ಎಂದು ಹೇಳಬಹುದು ಇದ್ದರಿಂದ ಪಠ್ಯಪುಸ್ತಕದಲ್ಲಿ ಸೇರಿಸುವುದು ಬಹಳ ಅವ್ಯಶವಾಗಿದೆ 4 ಮಹತ್ವದಾಗಿದೆ ಎಂದು ಹೆಳಬಹುದು.

**8 ಇತಿಹಾಸದ ಪ್ರಸಿದ್ಧ ಘಟನೆಗಳ ತೌಲಾನಿಕ ಅಧ್ಯಯನ:–**

ಗೋರಟಾದ ಘಟನೆ ಇದು ಇತಿಹಾಸದಲ್ಲಿ ನಡೆದ ಘಟನೆಗಳ ಅಧ್ಯಯನಕ್ಕೆ ಹೋಲಿಸಿದರೆ ಒಂದು ವಿಚಿತ್ರವಾದ ಘಟನೆಯಾಗಿದೆ ಎಂದು ಹೇಳಬಹುದು ಇಂತಹ ಘಟನೆಗಳಲ್ಲಿ ವಿಧುಕಾಶ್ವಥ ಘಟನೆ ಈ ಸೇರು ಧುರಂತ ಮತ್ತು ಬಲಿಯನವಾಬಾಗ ದುರಂತದಂತ ಇದೊಂದು ಕೂಡಾ ಬಹಳ ದುರದೃಷ್ಟಿಕರ ಘಟನೆಯಾಗಿದೆ ಇದ್ದರಿಂದ ಹೈದರಬಾದ –ಕರ್ನಾಟಕದಲ್ಲಿ ನಡೆದ ಈ ಘಟನೆಯು ಇತಿಹಾಸಕ್ಕೆ ಸೇರಬೆಕಾಗಿದೆ ಇದ್ದರಿಂದ ಇತಿಹಾಸದಲ್ಲಿ ನಡೆದಂತಹ ಘಟನೆ ಇದಾಗಿದ್ದರಿಂದ ಇದೇಂದು ಅಳಿಸಲಾಗದಂತಹ ಇತಿಹಾಸದ ಅನ್ಯ ಹೋರಾಟಗಳ ಘಟನೆಯ ಜೋತೆ ಇದ್ದನ್ನು ಹೋಲಿಸಬಹುದು ಹೀಗಾಗಿ ಇದೇಂದು ಪ್ರಮುಖ –ಅಧ್ಯಯನದ ಘಟನೆಯಾಗಿದೆ

**9 ಇತಿಹಾಸದಲ್ಲಿ ಮರೆಯಾಗುತ್ತಿರುವ ಘಟನೆಯ ಚಿತ್ರಣ :–**

ರಜಾಕಾರರ ಹಾವಳಿಯಲ್ಲಿ ಹಾಳಾದಂತಹ ಈ ಗೋರಟಾ ಗ್ರಾಮದ ಹೆಸರು ಇತಿಹಾಸದಲ್ಲಿ ಮರೆಯಾಗುತ್ತಿರುವ ಒಂದು ಆಘಾತಕಾರಿ ಘಟನೆಯಾಗಿದೆ ಹೀಗಾಗಿ ಈ ಘಟನೆಯನ್ನು ಕುರಿತು

ಜನರಿಗೆ ಮತ್ತು ಹೈದರಬಾದ ಕರ್ನಾಟಕದ ಜನತೆಗೆ ಮತ್ತು ದೇಶಕ್ಕೆ ತಿಳಿಸುವಂತಹ ಘಟನೆಯಾಗಿದ್ದು ಅಲ್ಲಿ ಆಗಿರುವ ಕೂಲೆ,ಸೂಲಿಗೆ ಹೆಣ್ಣುಮಕ್ಕಳ ಮಾನಭಂಗ ,ಇನ್ನಿತರೇ ಅಂಶಗಳು ಮತ್ತು ಅಲ್ಲಿ ಹಾಳಾಗಿರುವಂತಹ ಅವಶೇಷಗಳು ಬಗ್ಗೆ ತಿಳುಸೀಕೊಡುವದು ಬಹಳ ಅತ್ಯಅವಶ್ಯಕವಾಗಿದೆ ಹೀಗಾಗಿ ಈ ಘಟನೆಯನ್ನು ಪುನ:ಅದರ ಬಗ್ಗೆ ಘಟನೆಯನ್ನು ಮರೆಯಾಗದಂತೆ ಚಿತ್ರಸುವುದು ಬಹಳ ಅವಶ್ಯಕವಾಗಿದೆ ಮತ್ತು ಇದನ್ನು ನೆನಪಿಸುವದು ಬಹಳ ಮಹತ್ವದಾಗಿದೆ,

**10 ನಮ್ಮ ಹಿರಿಯರ ಒಂದು ಸವಿನೆನಪು:-**

ರಜಾಕಾರರ ಹಾವಳಿಯಿಂದ ಆದಂತಹ ಗೋರಟಾ ಘಟನೆಯ ಮೂಲಕ ಆಗಿನ ಚಳುವಳಿಯಲ್ಲಿ ಹೋರಾಡಿದ ಹಿರಿಯರನ್ನು ನೆನಪಿಸಿಕೋಳ್ಳವ ಒಂದು ಸವಿನೆನಪಿನ ಘಟನೆಯಾಗಿದೆ ಎಂದು ಹೇಳಬಹುದು ಇದ್ದರಿಂದ ಈ ಘಟನೆಯಲ್ಲಿ ತಮ್ಮ ದೇಹವನ್ನು ಮುಡುಪಾಗಿಟ್ಟು ತಮ್ಮ ಪ್ರಾಣವನ್ನು ಬಿಟ್ಟಂತಹ ನಮ್ಮ ಹಿರಿಯರ ನೆನಪಿಗೊಸ್ಕರ ಪ್ರತಿವರ್ಷ ಊರಲ್ಲಿ ಅವರ ಪೂಜೆಯನ್ನು ಆ ದಿನ ಶೋಕಚಾರಣೆ ದಿನವನಾಗಿ ಆಚರಿಸಬೇಕು ಹೀಗಾಗಿ ಅವರನ್ನು ನೆನಪಿಸಿಕೊಳ್ಳವದು ನಮ್ಮೆಲರ ಮತ್ತು ಇಂದಿನ ಪಿಳಿಗೆಯ ಆದ್ಯ ಕರ್ತವ್ಯವಾಗಿದೆ,

# ಅಡಿ ಟಿಪ್ಪಣಿಗಳು

1 ಮಹಾಬಲೇಶ್ವರಪ್ಪಾ .ಬಿ.ಸಿ, ಹೈದ್ರಾಬಾದ ಕರ್ನಾಟಕದ ರಾಜಕೀಯ ಚಳುವಳಿಗಳು, ಪು.36

2 ಅದೇ , ಪು.41

3 ಅದೇ, ಪು.55.

4 ಅದೇ, ಪು.48

# ಅದ್ಯಾಯ-4

## ಗೋರ್ಟಾ ಮೇಲೆ ರಜಾಕರರ ಪ್ರಭಾವ

ಗೋರ್ಟಾ ಹತ್ಯಕಾಂಡದದಲ್ಲಿ ರಜಾಕಾರರು ತಮ್ಮದೆ ಆದ ಕೆಟ್ಟ ಪ್ರಭಾವವನ್ನು ಬೀರಿ ಪೂರ್ಣ ಗ್ರಾಮವನ್ನು ಹಾಳುಮಾಡಿ ಸಂಪೂರ್ಣವಾಗಿ ನಾಶಮಾಡಿದರು.

***ರಜಕರರು ಎಂದರೆ ಯಾರು?**

ರಜಾಕಾರರ ಪದದ ಅರ್ಥವನ್ನು 2ಪ್ರಕಾರಗಳಲ್ಲಿ ಕಾಣಬಹುದು.

ಸಾಹಿತ್ಯದ ಪ್ರಕಾರ "ದೇವರ ಸೇವೆಗೆ ಮುಡುಪಾಗಿರುವ ವ್ಯಕ್ತಿ" ಎಂದರ್ಥ

ನೈಜ ಅರ್ಥದಲ್ಲಿ "ಇಸ್ಲಾಂ ಇದೊಂದು ಸಾಂಸ್ಕೃತಿಕ ಸಂಘವಾಗಿದ್ದು, ಇಸ್ಲಾಂ ಸಂಸ್ಕೃತಿಯ ಮೌಲ್ಯಗಳನ್ನು ಎತ್ತಿ ಹಿಡಿಯುವುದಾಗಿತ್ತು"[9]

***ಇಥ್ತೆಹಾನ್- ಉಲ್-ಇಸ್ಲಾಂ ಸ್ಥಾಪನೆ:-**

ಕ್ರಿ.ಶ.1926ರಲ್ಲಿ ಹೈದ್ರಾಬಾದ ಸಂಸ್ಥಾನದಡಿಯಲ್ಲಿ ನಿವೃತ್ತ ICS ಅಧಿಕಾರಿ-ಯಾದ "ಮಹ್ಮದ ನವಾಜ " ನು ಈ ಸಂಸ್ಥೆಯನ್ನು ಹುಟ್ಟು ಹಾಕಿದನು ಇದೊಂದು ಸಾಂಸ್ಕೃತಿಕ ಸಂಘವಾಗಿತ್ತು. ಆದರೆ 1946-47ರಲ್ಲಿ ಖಾಸಿಂ ರಜ್ವಿಯಿಂದ ಇದು ನಿಜಾಮನ ಅರೆ ಸೈನಿಕ ಪಡೆಯಾಯಿತು.

***ರಜಾಕರ ರಾಜಕೀಯ ಸಿದ್ದಾಂತ ಅಥವಾ ಉದ್ದೇಶಗಳು:-**

1 ನಿಜಾಮ ಸರಕಾರವನ್ನು ರಕ್ಷಣೆ ಮಾಡುವದು*

2 ಇಸ್ಲಾಂ ರಾಜ್ಯವನ್ನು ಸ್ಥಾಪಿಸುವದು.

3 ಹೈ.ಸಂಸ್ಥಾನದಲ್ಲಿ ಮುಸ್ಲಿಂರ ಆಡಳಿತ ಮತ್ತು ಅಧಿಪತ್ಯವಿರಬೇಕು.

4 ಅಲ್ಲಾ ಹಜರತ್ ಆಜ್ಞೆಯೇ ಅಂತಿಮ ಕಾರಣ

5 ಹೈದ್ರಾಬಾದ ಸ್ವಾತಂತ್ರ್ಯವನ್ನು ವಿರೋಧಿಸುವವರು ದೇಶ ಭಕ್ತರಲ್ಲ.

6 ದೆಹಲಿಯ ಕೆಂಪು ಕೋಟೆ ಮೇಲೆ "ಅಸಫ ಜಹಾ" ಧ್ವಜವನ್ನು ಹಾರಿಸುವ ಆಕಾಂಕ್ಷೆ.

7 ನಿಜಾಮ ರಾಜ್ಯದ ಮೇಲೆ ಭಾರತದ ಒಕ್ಕೂಟದ ನೆರಳು ಸಹ ಬೀಳದಂತೆ ತಡೆಯುವದು.

8 ಎಂದೆಂದಿಗೂ ಹೈದ್ರಾಬಾದ ಸಂಸ್ಥಾನ "ಆಜಾದ್ ಹೈದ್ರಾಬಾದ" ಆಗಿಯೇ ಉಳಿಯಬೇಕು.

9 ರಾಷ್ಟ್ರೀಯ ಹೋರಾಟಗಾರರ ಚಳುವಳಿಗಳನ್ನು ತಡೆ ಹಿಡಿಯುವದು.

10 ಪಟ್ಟಣ, ನಗರ ಮತ್ತು ಹಳ್ಳಿಗಳಲ್ಲಿ ರಜಾಕರ ಪರೇಡ ನಡೆಸುವದು.&ಜನರಲ್ಲಿ ಭಯ ಹುಟ್ಟಿಸುವದು.

**2) ಖಾಸಿಂ ರಜ್ವಿಯ ಪ್ರವೇಶ:–**

ಖಾಸಿಂ ರಜ್ವಿ ಈತ ಮಹಾರಾಷ್ಟ್ರದ ಲಾತೂರಿನಲ್ಲಿ ಅತ್ಯಂತ ಬಡ ಕುಟುಂಬದಲ್ಲಿ ಜನ್ಮ ತಾಳಿದನು. ಉದ್ಯೋಗಾಕಾಂಕ್ಷಿಯಾಗಿ ಅಲಿಘಡ ವಿಶ್ವವಿದ್ಯಾಲಯಕ್ಕೆ ತೆರಳಿ ಅದರ ಆವರಣದಡಿಯಲ್ಲಿ ಒಂದು ಚಹಾದಂಗಡಿಯನ್ನು. ಇಟ್ಟುಕೊಂಡು ಅಲ್ಲಿಯೇ ಇಸ್ಲಾಂ ಧರ್ಮದ ತತ್ವಗಳಿಗೆ ಪ್ರಭಾವಿತನಾಗಿ ಕಾನೂನು ಪದವಿಯನ್ನು ಮುಗಿಸಿದನು.ರಜ್ವಿ ಒಬ್ಬ ಸುಂದರ ವ್ಯಕ್ತಿಯಾಗಿದ್ದು ಅಸಾಮನ್ಯ ವಾಕ್ ಚಾತುರ್ಯವನ್ನು ಹೊಂದಿದ್ದ.

1946–47ರ ಸಂದರ್ಭದಲ್ಲಿ ಖಾಸಿಂ ರಜ್ವಿ “ಇಥ್ಥೆಹಾದ ಉಲ್ ಇಸ್ಲಾಮಿನ್” ಅಧಿಪತಿಯಾದನು. ಇದರೊಂದಿಗೆ ಹೈಸಂಸ್ಥಾನದಲ್ಲಿ ಪ್ರಭಾವಿ ವ್ಯಕ್ತಿಯಾಗಿ ಮಾರ್ಪಟ್ಟು, ಅದನ್ನು ಅರೆ ಸೈನಿಕ ಪಡೆಯಾಗಿ ಪರಿವರ್ತಿಸಿದನು.

**3) ಖಾಸಿಂ ರಜ್ವಿಯ ಬೆಂಬಲಿಗರು:–**

1946ರಿಂದ 48ರ ಅವಧಿಯಲ್ಲಿ ರಜ್ವಿ ಅತ್ಯಂತ ಪ್ರಭಾವಿ ವ್ಯಕ್ತಿಯಾಗಿ ಮಾರ್ಪಟ್ಟನ್ನು ಕಾರಣ ಸಂಖ್ಯಾತ ಮುಸ್ಲಿಂರು ಇತನ ಅನುಯಾಯಿಗಳಾದರು. ಅವರಲ್ಲಿ ಪ್ರಮುಖರು.

- ನವಾಬ ಮೋಹಿನ್
- ಅಬ್ದುಲ್ ರಹಿಂ
- ಪಿಂಗಳೆ ವೆಂಕಟರೆಡ್ಡಿ
- ಸೈಯದ ತಾಜೋದ್ದಿನ್.[2]

**4) ಖಾಸಿಂ ರಜ್ವಿಯ ಕಾರ್ಯಚರಣೆಗಳು:–**

ಆಜಾದ್ ಹೈದ್ರಾಬಾದನ್ನು ಸ್ಥಾಪಿಸಲು ಪ್ರತಿಯೊಬ್ಬ ಮುಸ್ಲಿಂ ರಜಾಕರಿಗೆ 21 ದಿನಗಳ ವರೆಗೆ ತರಬೇತಿಯನ್ನು ನೀಡಿದನು (ಮಿಲಿಟರಿ) ರಾಷ್ಟ್ರೀಯವಾದಿಗಳ ವಿಲಿನ ಚಳುವಳಿಯನ್ನು ಹತ್ತಿಕ್ಕಲು, ಆರ್ಯ ಸಮಾಜ, ಹಿಂದೂ ಮಹಾ ಸಭಾ, ವಿದ್ಯಾರ್ಥಿ ಒಕ್ಕೂಟ ಹಾಗು ಕಾಂಗ್ರೆಸ್ ಕಾರ್ಯಕರ್ತರಲ್ಲಿ ಭಯ ಹುಟ್ಟಿಸಲು 200 ರಿಂದ 250 ಜನರ ಒಂದೊಂದು ಗುಂಪನ್ನು ರಚಿಸಿ 16 ಜಿಲ್ಲೆಗಳಾದ್ಯಂತ 352 ಕಡೆ ರಜಾಕರ ಸೇನಾ ಪಡೆಗಳನ್ನು ನೇಮಿಸಿದರು.

ಉದಾ:– ರಾಯಚೂರು, ಕೊಪ್ಪಳ, ಗುಲ್ಬರ್ಗಾ ಆಳಂದ, ಯಳಸಾವಳಗಿ, ಇತ್ಯಾದಿ.

ಮೊಘಲಾಯಿ ಅಧಿಕಾರಿಗಳು, ಮಘದಾರ್, ನಾಯಕ, ಪೋಲಿಸ ಪಾಟೀಲ್, ಮಾಲಿ ಪಾಟೀಲ್ ಮುಂತಾದವರ ಸಹಾಯವನ್ನು ಪಡೆದುಕೊಂಡು, ನಿಜಾಮನ ರೇಡಿಯೋ ಮತ್ತು ಸೈನ್ಯವನ್ನು ತನ್ನ ಗುರಿ ಸಾಧನೆಗಾಗಿ ಉಪಯೋಗಿಸಿಕೊಂಡನು.

5) **ರಜಾಕರರ ಹಾವಳಿ:–**

- ರಾಷ್ಟ್ರಿಯ ಹೋರಾಟಗಾರರ ಮನ ಮತ್ತು ಮನೆಗಳಲ್ಲಿ ಭಯವನ್ನು ಹುಟ್ಟಿಸಿದರು.
- ಸ್ವಾತಂತ್ರ್ಯ ಯೋಧನರನ್ನು ಅ ಗೌರಯಿಸಿದರು.
- ರಜ್ಜಿ ಬೆಂಬಲಿಗ್ವರ ರಕ್ಷಣೆ ಮಾಡಿದರು
- ಹೋರಾಟಗಾರರ ಆಸ್ತಿ ಪಾಸ್ತಿಗಳ ಜಖಂ ಮಾಡಿದರು.
- ರಾಷ್ಟ್ರಿಯವಾದಿಗಳ ಮಹಿಳೆಚುರ ಮೇಲೆ ಅತ್ಯಚಾರ ವೆಸಗಿದರು.
- ಕರೋಡ ನಿರಿನಾಕ ಮೇಲೆ ದಾಳಿ ಮಾಡಿ ಅದನ್ನು ಲೂಟಿ ಮಾಡಿದರು. ಅದರಿಂದ ತಮಗೆ ಬೇಕಾದ ಆಯುಧಗಳನ್ನು ಖರೀದಿಸಿದರು.
- ಚಿಕ್ಕ–ಪುಟ್ಟ ಮಕ್ಕಳ ಹೃದಯಕ್ಕೆ ಭರ್ಜಿಯನ್ನು ಚುಚ್ಚಿ ಓಣಿ ಓಣಿ ತಿರುಗಾಡಿದರು.

  ಈ ಎಲ್ಲಾ ರಜಾಕರ

  ಅತ್ಯಾಚಾರಗಳು ಆಳಂದ, ಹುಮನಾಬಾದ, ಗೋರ್ಟಾ(ಬಿ), ಗುಲ್ಬರ್ಗಾ, ಚಿಟಗುಪ್ಪ, ಯಳಸಂಗಿ, ಸಿಂಧಗಿ, ನೆಲಂಗಾ, ಇತ್ಯಾದಿ ಕಡೆ ಅವಿರತವಾಗಿ ನಡೆಯಿತು.

  ಉದಾ:– 1947ಮೇ16ರಂದು ಮಾಹಗಾಂವನ ಚಂದ್ರಶೇಖರ ಪಾಟೀಲರ ಕೈ ಕಾಲುಗಳಿಗೆ ಸರಪಳಿ ಕೊಡಿಸಿ ಗುಲ್ಬರ್ಗಾದಲ್ಲಿ ಮೆರವಣಿಗೆ ಮಾಡಿದರು.

6) **ರಜಾಕರರ ಹಾವಳಿಗೆ ಬಲಿಯಾದ ಜನರು:–**

1) ಯಲಬುರ್ಗಾ ತಾಲುಕಿನ ಹೈತಾಪುರದ 3ಕುರುಬ ಜನಾಂಗದ ಸ್ವಾತಂತ್ರ್ಯ ಹೋರಾಟಗಾರರು ಅಸುನಿಗಿದರು.
2) ಹುಮನಾಬಾದನಲ್ಲಿ ರಾಮಚೆಂದ್ರ ವೀರಪ್ಪನವರ ಸಹಚರರಾದ ಎಸ್.ನೆಲೊಗಿ, ರಾಘವೆಂದ್ರರಾವ, ಲಕ್ಷ್ಮಣ ಕಾಜೆ, ಅವರು ರಜಾಕರರ ಗುಂಡಿಗೆ ಬಲಿಯಾದರು.
3) 1946–47ರಲ್ಲಿ ಗುಲ್ಬರ್ಗಾ ಬೀದರ ಜಿಲ್ಲೆಗಳಲ್ಲಿ ಕೋಮು ಗಲಭೆ ಏರ್ಪಟ್ಟಿತ್ತು.
4) ರಜಾಕರ ದಾಳಿಗೆ ಬೀದರಿನ ಗಂಜ ಪ್ರದೇಶದ 80 ಅಂಗಡಿಗಳು ಸುಟ್ಟು ಹೋದವು

ಇದನ್ನು ಕುರಿತು ಗಾಂಧಿಜೀ ಅವರು "ಲಂಕಾ ದಹನದ ನಂತರ ಬೀದರ ದಹನ" ವಾಯಿತ್ತೆಂದು ಸಂಭೋದಿಸಿದರು.[೩]

7) **ರಜಾಕರರ ವಿರುದ್ಧ ಹೋರಾಟ:-**

ರಜಾಕರರ ಮತ್ತು ನಿಜಾಮನ ದಮನಕಾರಿ ಕಾಯ್ದೆಗಳಿಗೆ ದೃತಿಗೆಡದ ಹೈದ್ರಾಬಾದ ಗಾಂಧಿರಾಜ್ಯ ಕಾಂಗ್ರೇಸನ ಅಧ್ಯಕ್ಷರಾದ ಸ್ವಾಮಿ ರಮಾನಂದ ತಿರ್ಥರು "ಮೆಕೆಂಜಿ ವರದಿ" ವಿರುದ್ದ ಒಂದು ಶೈಕ್ಷಣಿಕ ಸಮಾವೇಶದಲ್ಲಿ ಅವರು ಮಾಡಿದ ಭಾಷಣ ಹಾಗೂ 1936ರಲ್ಲಿ ಉಸ್ಮಾನಿಯಾ ವಿಶ್ವವಿದ್ಯಾಲಯದ ಜನ್ಮಾಷ್ಟಮಿ ದಿನ ಮಾಡಿದ ಭಾಷಣದದಿಂದ ಸ್ವಾಮಜಿ ಪ್ರಸಿದ್ದರಾದರು.

ಮದ್ಯ ಪ್ರದೇಶದ ಮುಖ್ಯಮಂತ್ರಿಗಳಾಗಿದ್ದ S.C.ಶುಕ್ಲಾ, ಬಾಂಬೆ ಮುಖ್ಯಮಂತ್ರಿಯಾಗಿದ್ದ V.P.ನಾಯಕ, ಮೈಸೂರು ಕಾಂಗ್ರೆಸಿನ ಧುರೀಣರಾಗಿದ್ದ ಎಸ್.ನಿಜಲಿಂಗಪ್ಪ. ವಲ್ಲಭಾಯಿ ಪಟೇಲ್, ಮುರಾರ್ಜಿ ದೇಸಾಯಿ, ವಾಯ.ಬಿ.ಚವ್ಹಾಣ ಮುಂತಾದ ನಾಯಕರಿಗೆ ತರಬೆತಿಯನ್ನು ನೀಡಿ "ಮಾಡು ಇಲ್ಲವೆ ಮಡಿ" ಎಂಬ ಕೃತಿ ನಿಡಿದರು, ಸ್ವಾತಂತ್ರ್ಯ ಹೋರಾಟಗಾರರಿಗೆ, INA ಯ ಅಧಿಕಾರಿಗಳಾಗಿದ್ದ ಕ್ಯಾಪ್ಟನ್ "ರಾಮಚಂದ್ರ ಸಿಂಣ್" ಹಾಗೂ "ಜಗತ್ ಸಿಂಗರು" ರಜಾಕರ ವಿರುದ್ದ ಹೋರಾಡಲು ಮಿಲಿಟರಿ ಆಡಳಿತ ನೀಡಿದರು.[೪]

8) **ರಾಷ್ಟ್ರೀಯ ವಾದಿಗಳ ಸಾಧನೆಗಳು:-**

1) ನಿಜಾಮ ಸರಕಾರ ಮತ್ತು ಹೋರಾಡಿ ಜನತೆಗೆ ಧಾರ್ಮಿಕ ಮತ್ತು ನಾಗರಿಕ ಹಕ್ಕುಗಳನ್ನು ಪಡೆಯುವಂತೆ ಮಾಡಿದರು.

2) ರಜಾಕರ ವಿರುದ್ದ ಹೋರಾಡಲು ಸೊಲ್ಲಾಪುರ ಸಾಂಗ್ಲಿ,ಗದಗ, ಮಂತ್ರಾಲಯ, ಹೊಸಪೇಟೆ, ಬಿಜಾಪೂರ, ಹುಬ್ಬಳ್ಳಿ, ಕೊಪ್ಪಳ, ಮುಂತಾದ ಕಡೆ ರಾಷ್ಟ್ರಿಯವಾದಿಗಳಿಗೆ INA ಅಧಿಕಾರಿಗಳಿಂದ ತರಬೇತಿ ನಿಡಲಾಯಿತು.

3) ರಜಾಕರ ವಿರುದ್ದ ವೀರ ವನಿತೆಯರಾದ ಬೆಳಗಿಯ ಈರಪ್ಪ , ಇಟಗಿಯ ಸಿ.ಮೊಟಮ್ಮ ಅಪ್ರತಿಮ ಶೌರ್ಯ ಮೆರೆದರು.

4) ನಿಷೇಧ ಕಾಯ್ದೆಗಳಾದ ಮೈಘೋಜ ಗಯ್ಯಾರ ಮೈಘೋಜ ಎಂಬ ಕಾಯ್ದೆಗಳನ್ನು ಹಿಂದೆಗೆದು ಕೊಳ್ಳುವಂತೆ ನಿಜಾಮ ಸರಕಾರದ ಮೇಲೆ ಒತ್ತಡ ತಂದರು.

5) ಸರಕಾರದಲ್ಲಿ ಬಲಿಷ್ಠ ಅಧಿಕಾರಿಗಳಾಗಿದ್ದ ಕೆಲ ದೇಶ ಪ್ರೇಮಿಗಳು ಹೋರಾಟಗಾರರಿಗೆ ಶಸ್ತ್ರಸ್ತ್ರಗಳನ್ನು ಪೂರೈಸಿದರು.

9) **ರಜಾಕರ ದಾಳಿಗೆ ತುತ್ತಾದ ಹಳ್ಳಿಗಳು:–**

ರಜಾಕರ ಹಾವಳಿಯ ಕಾಲಕ್ಕೆ ಹೈದ್ರಾಬಾದ ಸಂಸ್ಥಾನ ಒಂದು ಪೋಲಿಸ್ ರಾಜ್ಯವಾಗಿ ಮಾರ್ಪಟ್ಟಿತ್ತು ಮರಾಠಾವಾಡ, ತೆಲಂಗಾಣ ಮತ್ತು ಹೈದ್ರಾಬಾದ– ಕರ್ನಾಟಕ ಪ್ರದೇಶದ ಅನೇಕ ಹಳ್ಳಿಗಳು ರಜಾಕರ ಹಾವಳಿಗೆ ತುತ್ತಾಗಿ ಸ್ಮಶಾನ ದರ್ಶನವನ್ನು ಕಂಡವು, ಲಿಂಗಸೂರು, ಕುಷ್ಟಗಿ, ಸಿಂಧನೂರು, ಗೋರ್ಟಾ, ಮಾಹಗಾಂವ, ಚಿಂಚೋಳಿ, ಯಾದಗೀರ, ರಾಯಚೂರು, ಎಳಸಂಗಿ, ನಿಂಬರ್ಗಾ, ಗಾಣಗಾಪೂರ, ಅಫ್ಜಲಪೂರ, ಶಹಾಬಾದ, ಸುರಪೂರ, ಕಾರಟಗಿ, ಇತ್ಯಾದಿ,ಹಳ್ಳಿಗಳು ರಜಾಕರ ದಾಳಿಗೆ ತುತ್ತಾದವು.

ಗುಲ್ಬರ್ಗಾ ಜಿಲ್ಲೆಯಲ್ಲಿ ಒಟ್ಟು 77 ಹಳ್ಳಿಗಳು ದಾಳಿಗೆ ತುತ್ತಾಗಿ 19ಕೋಟಿ 4ಲಕ್ಷ ರೂ. ನಷ್ಟ ಅನುಭವಿಸಿತು.ಅಲ್ಲದೆ ಈ ಜಿಲ್ಲೆಯಲ್ಲಿ 42 ಜನರ ಮರಣ ಮತ್ತು 34 ಜನರ ಮೇಲೆ ಅತ್ಯಾಚಾರ ಎಸೆಗಲಾಯಿತು.

1) ರಾಯಚೂರು ಜಿಲ್ಲೆಯಲ್ಲಿ 97 ಹಳ್ಳಿಗಳು ರಜಾಕರ ದಾಳಿಗೆ ತುತ್ತಾಗಿ 53ಕೋಟಿ 21ಲಕ್ಷರೂ.ನಷ್ಟು ನಷ್ಟವಾಯಿತು. ಸುಮಾರು 25 ಜನರ ದುರ್ಮರಣವಾದರೆ, 63ಜನರ ಮೇಲೆ ಅತ್ಯಾಚಾರ ವಾಯಿತು.

2) ಬೀದರ ಜಿಲ್ಲೆಯಲ್ಲಿ 76 ಹಳ್ಳಿಗಳು ದಾಳಿಗೆ ತುತ್ತಾದರೆ, 35 ಕೋಟಿ 60ಲಕ್ಷ ರೂ. ನಷ್ಟವಾಯಿತು ಅಲ್ಲದೆ 120 ಜನ ಮರಣ ಹೊಂದಿ, 15 ಜನರ ಮೇಲೆ ಅತ್ಯಾಚಾರ ಎಸೆಗಲಾಯಿತು.

ರಜಾಕರ ಹಾವಳಿಯಿಂದ ಒಟ್ಟಾರೆ 1,20,000 ಜನ ನಿರಾಶ್ರೀತರಾದರು. ರಜಾಕಾರರ ಹಾವಳಿಯಿಂದ ಒಂದರಲ್ಲೆ 12,0000 ಜನ ನಿರಾಶ್ರೀತರಿದ್ದರು.

ಸೋಲಾಪೂರ ಒಂದರಲ್ಲೆ 12000ಜನ ನೀರಾಶ್ರಿತರಾದರು[೫]

**ನಿರಾಶ್ರಿತರ ಶಿಬಿರಗಳು**

ರಜಾಕಾರರ ಭಯೋತ್ಪಾದನೆಯಿಂದ ಹದ್ರಾಬದ ಸಂಸ್ಥಾನದ ಅನೇಕ ಮುಗ್ದ ಜನರು ಮತ್ತು ಸ್ವತಂತ್ರ್ಯ ಪ್ರೇಮಿಗಳು ತಮಮ ಆಸ್ತಿಪಾಸ್ತಿಗಳನ್ನು ಕಳೆದುಕೊಂಡು ನಿರಾಶ್ರಿತರಾಗಿ ದನುಕರುಗಳು ಸಮೇತ ಮುಂಬಯಿ ಮದ್ರಾಸ ಪ್ರಾಂತ್ಯಗಳಿಗೆ ಅಂದರೆ ಮಂತ್ರಾಲಯ ಬಳ್ಳಾರಿ ಸಿರುಗುಪ್ಪ , ಹೋಸಪೇಟೆ ಅಧೋನಿ ಸೋಲಾಪುರ ಮದ್ರಾಸ ಗದಗ , ಕಾಂಚನಾ ಗಂಗಾ , ಇತ್ಯಾದಿ ಸ್ಥಳಗಳಿಗೆ ಒಲಸೆ ಹೋದರು. ಹೈದ್ರಾಬಾದ ಸಂಸ್ಥಾನದ 10ಕಿಮೀ.ಒಳಗೆ ಗಡಿ ಶಿಬಿರಗಳನ್ನು ಸ್ಥಾಪಿಸಿದರು

ಖಾಸಿಂ ರಜ್ವಿಯ ಉದ್ರೇಕಕಾರಿ ಭಾಷಣ

ಖಾಸಿಂ ರಜ್ವಿ ಹೈದ್ರಾಬಾದ ಸಂಸ್ಥಾನವನ್ನು ಮುಸ್ಲಿಂ ರಾಜ್ಯ ಮಾಡಬೇಕೆಂದು ನಿರ್ದರಿಸಿ ಅತ್ಯಂತ ವಿಷಕಾರಿ ಭಾಷಣ ಮಾಡಿದನು "ಖಾಸಿಂ ರಜ್ವಿ ನೆಹರು ಪಟೇಲರನ್ನು ಕಟುವಾಗಿ ಟೀಕುಸುತ್ತಾ ನಿಜಾಂಕೀ ಖದಮೊಂಪೆ ನೆಹರುಕೋ ಝುಕಾದೇಂಗೆ" ಮತ್ತು ಪಟೇಲ್ ಮುನ್ನಿಕೋ ಖಬರೋಂ ಮೇ ಗಾಡ ದೆಂಗೆ"

ಎಂದು ಹೈದ್ರಾಬಾದ ಸಂಸ್ಥಾನ ಎಂದಿಗೂ ಇಸ್ಲಾಮಿ ರಾಜ್ಯವಾಗಿದೆ ಭಾರತ ಒಕ್ಕೂಟವು ದಕ್ಷಿಣದಲ್ಲಿ ಇಸ್ಲಾಂ ಪ್ರಭುತ್ವವನ್ನು ಅಳಿಸಿ ಹಾಕುವ ಪ್ರಯತ್ನದಲ್ಲಿ ತೊಡಗಿದೆ. ನೆನಪಿರಲಿ ಭಾರತದ ನಾಲ್ಕುವರೆ ಕೋಟಿ ಮುಸಲ್ಮಾನರು ಇಸ್ಲಾಂ ಧ್ವಜವನ್ನು ಹಾರಿಸಲು ನಮ್ಮತ್ತ ನೋಡುತ್ತಿದ್ದಾರೆ.

ದಕ್ಷಿಣ ಭಾರತದಲ್ಲಿ ನಾವು ಕಳೆದ ಎಂಟುನೂರು ವರ್ಷಗಳಿಂದ ಆಳುತ್ತಿದ್ದೆವೆ. ಇನ್ನು ಮುಂದೆಯು ಭಾರತವ್ನಾಳುತ್ತೇವೆ. ಒಂದು ಸಾವಿರ ವರ್ಷಗಳ ಅನಂತರ ಭಾರತದ ಒಕ್ಕೂಟಕ್ಕೆ ಅಧಿಕಾರ ಬಂದಿದೆ ಆದರೆ ನಮ್ಮ ಆಳಲು ಹಿಂದೂಗಳು ಸಮರ್ಥರಲ್ಲ ಅದೇ ಕಾರಣದಿಂದ ಅವರು ಮುಸಲ್ಮಾನರಿಂದ ಸೋಲಿಸಲ್ಪಟ್ಟರು. ಭಾರತ ಒಕ್ಕೂಟ ನಮ್ಮ ಮೇಲೆ ದಾಳಿ ಮಾಡಿದರೆ ಭಾರತದ ಎಲ್ಲಾ ಮುಸಲ್ಮಾನರು ಬಂಡಾಯದ ಧ್ವಜವನ್ನು ಹಾರಿಸಿ ನಮ್ಮ ಸಹಾಯಕ್ಕೆ ಬರುತ್ತಾರೆ. ಪ್ರತಿಯೊಬ್ಬ ಮುಸಲ್ಮಾನನಿಗೂ ಜೀಹಾದಿನ ಉತ್ಸಾಹವಿದೆ. ಎಂದು ನನಗೆ ಗೊತ್ತು ಮುಸ್ಲಿಮನೊಬ್ಬ ಹೋರಾಟಗಾರನಾಗಿದ್ದಾನಲ್ಲದೆ ಯೋಧನು ಆಗಿದ್ದಾನೆ. ಭಾರತದ ಇತಿಹಾಸ ಮುಸಲ್ಮಾನರ ಶೌರ್ಯ ಸಾಹಸಗಳ ವೀರಗಾತೆಯಾಗಿದೆ. ಭಾರತ

ಇವತ್ತು ಸ್ವತಂತ್ರವಾಗಿದ್ದರೆ ಅದಕ್ಕೆ ಮುಸಲ್ಮಾನರ ಕತ್ತಿ ಮತ್ತು ಶಸ್ತ್ರಾಸ್ತ್ರಗಳು ಕಾರಣ ಎಂಬ ಮಾತು ನಿಮಗೆ ತಿಳಿದಿರಲಿ.[5]

ಹಿಂದೂ ಕಾಫೀರನಾಗಿದ್ದು ಆತ ಕಲ್ಲುಗಳನ್ನು ಮರಗಳನ್ನು ಪೂಜಿಸುತ್ತಾನೆ. ಆತ ಗೋಮೂತ್ರ ಪಾನ ಮಾಡಿ ಧರ್ಮದ ಹೆಸರಿನಲ್ಲಿ ಅದರ ಸಗಣಿ ತಿನ್ನುತ್ತಾನೆ. ಅವನು ಅಕ್ಷರಶಹ: ಅನಾಗರಿಕ ನಾಗಿದ್ದು ನಮ್ಮನ್ನು ಆಳಲು ಬಯಸುತ್ತಾನೆ. ಇದೆಂತಹ ಆಕಾಂಕ್ಷೆ. ಇದೆಂತಹ ಹಗಲು ಗನಸು..ಈ ಪ್ರಕಾರ ಖಾಸಿಂ ರಜ್ವಿ ನಾಲ್ಕಾರು ವರ್ಷಗಳ ಪರ್ಯಂತ ಉದ್ರೇಕಕಾರಿ ಭಾಷಣಮಾಡುತ್ತಾ ರಾಜ್ಯದ ಮುಸಲ್ಮಾನರು ಹಿಂದೂಗಳ ವಿರುದ್ದ ಬಂಡೆಳುವಂತೆ ಪ್ರೋತ್ಸಾಹಿಸುತ್ತಿದ್ದ ಕೊನೆಗೆ ನಿಜಾಂನು ರಜ್ವಿಯ ಪ್ರಭಾವಕೊಳಕ್ಕಾಗಿ ರಜಾಕಾರರನ್ನು ಸಮರ್ತಿಸ ಬೇಕಾಯಿತು.ಹೈದ್ರಾಬಾದ ಸಂಸ್ಥಾನ ಭಾರತ ಒಕ್ಕುಟಕ್ಕೆ ಸೇರಿದ ಆ ನಂತರ ರಜ್ವಿಯನ್ನು ಪೋಲಿಸರು ಬಂದಿಸಿದರು ನ್ಯಾಯಲಯದ ವಿಚಾರಣೆ ನಡೆದು ಕೊನೆಗೆ ಅವನಿಗೆ 7ವರ್ಷಗಳ ಶಿಕ್ಷೆಯಾಯಿತು.ಸಾವಿರಾರು ಹಿಂದೂಗಳನ್ನು ಕೊಂದ ಗ್ರಾಮಗಳನ್ನು ಲೂಟಿ ಮಾಡಿದ, ಸ್ತ್ರೀಯರ ಮೇಲೆ ಅತ್ಯಾಚಾರ ಮಾಡಿದ ರಜಾಕರರ ಮುಖಂಡನಿಗೆ ಗಲ್ಲು ಶಿಕ್ಷೆ ಕೊಡಬಹುದಾಗಿತ್ತು. ದುರ್ದೈವ್ ಮುಸ್ಲಿಂ ಅಪರಾಧಿಗಳಿಗೆ ಈ ದೇಶದಲ್ಲಿ ನ್ಯಾಯಂಗದ ಅನುಕಂಪವಿದೆ. ಶಿಕ್ಷೆ ಮುಗಿಸಿದ ಆನಂತರ ರಜ್ವಿ ಪಾಕಿಸ್ತಾನಕ್ಕೆ ಹೋದನು ಅಲ್ಲಿ ಆತನನ್ನು ಯಾರು ಕೇಳಲಿಲ್ಲ ಆತ ಸತ್ತಾಗ ಜನರು ಕಣ್ಣಿರು ಸಹ ಸುರಿಸಲಿಲ್ಲ. ಈ ರೀತಿಯಾಗಿ ಖಾಸಿಂ ರಜ್ವಿಯ ಅಂತ್ಯವಾಯಿತು.

# ಅಡಿ ಟಿಪ್ಪಣೆಗಳು

1 ಮಹಾಬಲೇಶ್ವರಪ್ಪಾ .ಬಿ.ಸಿ.ಹೈದರಾಬಾದ ಕರ್ನಾಟಕದ ರಾಜಕೀಯ ಚಳುವಳಿಗಳು, ಪು .66

2 ಅದೇ, 67

3 ಜಗನ್ನಾಥ ಹೆಬ್ಬಾಳೆ (ಸಂ), ಬೀದರ ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರು, ಪು.87

4 ಪೂರ್ವೋಕ್ತ,ಪು.69

5 ಅದೇ , 95

6 ಗೋಪಾಲರಾವ ಹೆಜೀಬ್, ಅಪ್ರೀಯ ಸತ್ಯ, ಪು.22

7 ಅದೇ, 23

# ಅಧ್ಯಯ–ಐದು

## ಗೋರ್ಟಾ ಹತ್ಯಾಕಾಂಡ

ಬೀದರ ಜಿಲ್ಲೆಯ ಬಸವಕಲ್ಯಾಣ ತಾಲುಕಿಗೆ 18ಕಿ.ಮೀ ಅಂತರದಲ್ಲಿರುವ ಗೋರ್ಟಾ ಎನ್ನುವಂತಹ ಗ್ರಾಮ ಆ ಗ್ರಾಮದಲ್ಲಿ ಪ್ರಸಿದ್ದ ಗ್ರಾಮದ ದೈವನಾದ ಗೋರಕ್ಷನಾಥನ ಖಾಂಡ ಪ್ರಸ್ತಾವ ನಡೆಯುವಾಗ ಅಥವಾ ಇಸ್ಲಾಮಿಯರ ಮೋಹರಂ ಉರ್ಸ ನಡೆದರೆ ಎಲ್ಲರು ಬೆರೆತು ನಡೆಸುತ್ತಿದ್ದರು. ಆದರೆ ಹಿಂದೂ, ಮುಸ್ಲಿಂರಲ್ಲಿ ವೈಮನಸ್ಸು ಹುಟ್ಟಿತ್ತು.ಇದಕ್ಕೆ ಕಾರಣ ಹುಮನಾಬಾದಿಯ ಕಾಳ್ಗಿ ಮಸ್ತಾನ ಎಂಬ ಇಸ್ಲಾಂನು ವ್ಯಾಪಾರ ಮಾಡುತ್ತಾ ಗೊರ್ಟಾ ಗ್ರಾಮಕ್ಕೆ ಬಂದನು ಗೋರ್ಟಾದಲ್ಲಿ ಸದಾ ಹಿಂದುಗಳ ಜೊತೆ ಬೆರೆತು ಇರುವ ಇಸ್ಲಾಂ ಸಾಹೆಬ ಮುಲ್ಲಾ ಕಾಳ್ಗಿ ಮಸ್ತಾನನ ಮಾತು ಕೇಳಿ ಗೋರ್ಟಾ ಗ್ರಾಮದ ಮಸೂದೆಯ ನಂಬರ ಕಲ್ಲು ಕಿತ್ತಿ ಹಿಂದುಗಳ ಮೇಲೆ ಹಾಕಿ ಹಿಂದು ಮುಸ್ಲಿಂರ ನಡುವೆ ಒಡಕು ಹುಟ್ಟಿಸಿ ಜಗಳ ಹಚ್ಚಿದ ಆ ಜಗಳ ಪೂರ್ತಿ ಊರ ತುಂಬೆಲ್ಲ ಹರಡಿ ಭಯಂಕರ ಕೋಲಾಹಲ ಹುಟ್ಟಿಸಿತು.ನಿಜಾಮ ಸರ್ಕಾರದವರು ಮತ್ತು ಕುದರೆ ಪಾಗಾ ದವರು ಪೋಲಿಸನವರು ಗೋರ್ಟಾದಲ್ಲಿ ಒಂದು ತಿಂಗಳ ಉಳಿದು ತನಿಖೆ ನಡೆಸಿದರು ಆದರೆ ಹಿಂದೂಗಳು ನಾವು ಯಾರು ಆ ನಂಬರ ಕಲ್ಲು ಕಿತ್ತಿಲ್ಲವೆಂದು ಪರಿಪರಿಯಾಗಿ ಹೇಳಿಕೊಂಡರು ಕೊಂಡರು ಹಿಂದೂಗಳನ್ನು ಬಂದಿಸಿದರು.

ವೀರಶೆಟ್ಟಪ್ಪಾ ವಂಕೆ ಪೋಲಿಸಗೌಡರು ಉರಲ್ಲಿ ಪ್ರಮುಖರಾಗಿದ್ದು ಅವರನ್ನು ನಿಜಾಮ ಸರಕಾರದವರು ಅತಿ ಸ್ನೇಹದಿಂದ ಕಾಣುತ್ತಿದ್ದು ಅವರನ್ನು ಗುಪ್ತವಾಗಿ ಇಲ್ಲಿಂದ ಮರೆಯಾಗಿರಿ ಎಂದು ತಿಳಿಸಿದರಂತೆ ರುಸ್ತುಂಅಲಿ ತಹಸೀಲ್ದಾರ ವೆಂಕೆ ಅವರ ಮನೆಗೆ ಬಂದು ಎಲ್ಲಾದರು ಗುಪ್ತವಾಗಿ ಉಳಿಯಿರಿ ಎಂದು ಸಲಹೆ ಕೊಟ್ಟರು ಆಗ ವೆಂಕೆ ಗ್ಷಡರು ಹಿಂದೂಗಳು ತಪ್ಪಿತಸ್ಥರಲ್ಲ ನಿಮ್ಮ ಮುಲ್ಲಾ ನಂಬರ್ ಕಲ್ಲು ಕಿತ್ತಿ ನಮ್ ಹಿಂದೂಗಳ ಮೇಲೆ ಅಪವಾದ ಹಾಕಿದ್ದಾನೆ ಆಗ ಗೌಡರು ಬಡವರ ಹಿತಕ್ಕಾಗಿ ಸಾಯುವೆ ಯಾಕೆ ಗುಪ್ತವಾಗಿರಿ ಎಂದು ನನ್ನನು ತಿಳಿಸುವಿರಿ ಇದು ಸರಿವಿಲ್ಲ ವೆಂದು ಹೇಳಿದರು.[1] ಮೊದಲು ನನ್ನ ಕೈಗೆ ಹತ್ಕಡಿ ಆಮೇಲೆ ಬಡ ಬಗ್ಗರು ಎಂದು ಕೈ ಮುಂದೆ ಮಾಡಿ ಹತ್ಕಡಿ ಹಾಕಿಕೊಂಡು ಜೈಲು ಭೋಗಿಸಿದ ಮಹಾನ ವ್ಯಕ್ತಿ ವೀರಶೆಟ್ಟಪ್ಪಾ ವೆಂಕೆ ಹೀಗೆ ಭಹಳ ದಿವಸ ಈ ವ್ಯಜ್ಯ ನಡೆಯಿತು ಹೀಗೆ ಒಂದು ವರೆ ವರ್ಷದ ನಂತರ ಕೆಲವರನ್ನು ಬಿಟ್ಟರು ಮತ್ತೆ ಕೆಲವರನ್ನು ವರಂಗಲ ಜೈಲಿಗೆ ತೆಗೆದುಕೊಂಡು ಹೋಗಿ ಆರು ವರ್ಷದ ವರೆಗೆ ಶಿಕ್ಷೆಯನ್ನು

ವಿಧಿಸಿದರು. ಮತ್ತು ಕಲ್ಬುರ್ಗಿ ಜೈಲಿನಲ್ಲಿ ಕೆಲವು ಹಿಂದೂಗಳನ್ನು ತಪ್ಪತಸ್ಥರಿಲ್ಲವೆಂದು ಜೈಲಿನಿಂದ ಹೊರಬಿಟ್ಟರು ಇಂತಹ ಕಾರ್ಯ ಭಹಳ ದುಖದಿಂದ ನಡೆಯಿತು ಈದು ಶಾಲಿವಾಹ ಶಕೆ 1850 ಜೇಷ್ಠ ಮಾಸದಲ್ಲಿ ಜನರನ್ನ ಹಿಡಿದು ಒಯ್ಯದರು ಇದಕ್ಕೆ ಇಸವಿ ಸನ್.1338 ಫಸಲಿ ಎನ್ನುತ್ತಿದ್ದರು.

**ನಿಜಾಮ ರಾಜ್ಯದಲ್ಲಿ ತಿರಂಗಾ ಧ್ವಜ ಹಾರಿಸಿದ್ದು**

ಈ ಇಸ್ಲಾಂರಲ್ಲಿ ರಜಾಕರ ನಾಯಕ ಇಸಾಮುದ್ದಿನ ಭಹಳ ಗಡಿಬಿಡಿಯಲ್ಲಿ ಹೊನ್ನಾಳಿ ಗ್ರಾಮದ ಭಾವುರಾವ ಪಾಟೀಲ್ ಹಾಳಗೊರಟಾದ ವಿಠೋಬಾ ಘೋರವಾಡೆ ಮಡಿವಾಳಪ್ಪಾ ಇಂದ್ರಾಳೆ, ಇವರೆಲ್ಲರು ಕೂಡಿ ಹಾಳ ಗೋರ್ಟಾದಲ್ಲಿ ತಿರಂಗಾ ಧ್ವಜವನ್ನು ಹಾರಿಸಿದರು.ಆಗ ಸುದ್ದಿ ತಿಳಿದ ಇಸಾಮೊದ್ದಿನ ದುಬುಲಗುಂಡಿಯ ಅಮೀನರಿಗೆ ವರದಿಯನ್ನು ಮುಟ್ಟಿಸಿ ಆಗ ಅಮೀನನು ಹಾಳ ಗೊರ್ಟಾಕ್ಕೆ ಬಂದು ಆ ದ್ವಜವನ್ನು ಕೆಳಗಿಳಿಸಿದನು ಆಗ ಹಾಳಗೊರ್ಟಾದ ಧ್ವಜ ಏರಿಸಿದ ಪ್ರಮುಖರು ಅಮೀನಿನ ಕುದುರೆ ಹಿಡಿದು ಅಂಜಿಸಿದರು ಆಗ ಅಮೀನ ದುಬುಲಗುಂಡಿಯ ಅಮೀನ ತಿರಂಗಾ ಧ್ವಜ ಇಳಿಸಿರುವೆ ಎಂದು ರಸೀದಿಯನ್ನು ಪಡೆದರು ಆ ರಸೀದಿ ಭಾಲ್ಕಿಯಿಂದ ದೆಹಲಿಗೆ ಖಳಿಸಿದರು ಮರುದಿನ ದುಬುಲಗುಂಡಿಯ ಅಮೀನ ಸ್ಪೇಷಲ್ ಪೋಲಿಸರನ್ನು ಕರೆದುಕೊಂಡು ಹಾಳ ಗೊರ್ಟಾಕ್ಕೆ ಬಂದಾಗ ಅಲ್ಲಿ ಯಾರು ಆತನಿಗೆ ಸಿಗಲಿಲ್ಲ ಅಲ್ಲಿಂದ ಹೊನ್ನಳಿಗೆ ಬರಲು ಅಲ್ಲಿಂದ ಪ್ರಮುಖ ಬಾವುರಾವ ಪಟೇಲರ ಮನೆಯಲ್ಲಿ ಒಬ್ಬರು ಕೂಡಾ ಕಾಣಲಿಲ್ಲ ಆಗ ದುಬಲಗುಂಡಿಯ ಅಮೀನ್ ಗೊರ್ಟಾದ ರಜಾಕರ ನಾಯಕ ಇಸಾಮೊದ್ದಿನನ್ನು ಕರೆಸಿ ಕೆಲ ಮುಸ್ಲಿಂರನ್ನು ಕೂಡಿಕೊಂಡು ಬಾವರಾವ ಪಟೇಲರ ಮನೆಯನ್ನು ಕೊಳ್ಳೆ ಹೊಡೆದರು ಆಗ ಪಟೇಲರಿಗೆ ಸಿಟ್ಟು ಬಂದು ತನ್ನ ಪ್ರಮುಖರ ಜೊತೆ ಕೂಡಿಕೊಂಡು ಇಸಾಮೊದ್ದಿನನ್ನ ಹೊಡೆಯಲು ಹೊಂಚು ಹಾಕಿದರು ಅವರೆಲ್ಲ ಕೂಡಿಕೊಂಡು ಗೋರ್ಟಾದ ವೀರಶೆಟ್ಟಪ್ಪಾ ವೆಂಕೆ ಮತ್ತು ಮಹಾದಪ್ಪ ಡುಮಣೆ ಅವರಿಗೆ ತಿಳಿಸಿ ಇಸಾಮೊದ್ದಿನ್‌ನ್ನು ಹೊಡೆಯುತ್ತೆವೆ ಎಂದು ಹೇಳಿದರು ಆಗ ವೆಂಕೆ ಮತ್ತು ಡುಮಣೆ ಅವರು ಇಸಮೊದ್ದಿನನ್ನು ಹೊಡೆಯದಿರಿ ಅದರಿಂದ ಬಡಬಗ್ಗರೆಲ್ಲ ನಾವು ಕಷ್ಟ ಅನುಭವಿಸಿ ಸಾಯಬೇಕಾಗುತ್ತದೆ ಎಂದು ಹೇಳಿದರು ಆದರೆ ಪ್ರಮುಖರು ಅವನನ್ನೆ ಕೊಲ್ಲದೆ ಬಿಡುವುದಿಲ್ಲ ವೆಂದು ರಾತ್ರಿ ಅಪರಾತ್ರಿ ತಿರುಗುತ್ತಾ ಅವನನ್ನ ಹುಡುಕ ತೊಡಗಿದರು ಸ್ವತಂತ್ರ ಬಾರತದ ಮತು ನಿಜಾಂ ಸರಹದ್ದಿನ ವಾಗ್ದಾರಿ ಶಿಬಿರಕ್ಕೆ ಹೋಗು ಬರುವದು ಮಾಡುತ್ತಿದ್ದರು. ಅಂತಹ ಸಂಧಿಗ್ದ ಸಮಯದಲ್ಲಿ ಎಲ್ಲಿ ನೋಡಿದರು ಮುಸ್ಲಿಮರ ಹಾವಳಿ ನಡೆದ ಕಾರಣ ಅಂಜಿ ಗೋರಟಾದ ಜನತೆ

ನಗರಕ್ಕೆ ಹೋಗಿ ಬರದಂತಾಯಿತು ಒಮ್ಮೆ ಇಸಾಮೊದ್ದಿನನ್ನು ಗ್ರಾಮಸ್ಥರು ನಮ್ಮ ಮಾಲು ಬಾಜಾರಕ್ಕೆ ಒಯ್ಯಬೇಕಾದರೆ ನಮಗೆ ಅಂಜಿಕೆ ಬರುತ್ತದೆ.ಏನು ಮಾಡಬೇಕೆಂದು ಇಸಾಮೊದ್ದಿನನ್ನು ಕೇಳಿದರು.

ಅದಕ್ಕೆ ಇಸಾಮೋದ್ದಿನನು ನಾಳೆ ಎಷ್ಟು ಜನರು ಬರುವವರಿದ್ದಿರಿ ಬಸವಕಲ್ಯಾಣಕ್ಕೆ ಹೋಗೋಣ ಎಂದು ಹೇಳಿದ ಆಗ 40ಗಾಡಿಗಳನ್ನು ಕಟ್ಟಿ ಎಲ್ಲಾ ಜನರು ತಮ್ಮ ದವಸ ಧಾನ್ಯಗಳನ್ನು ಗಾಡಿಯಲ ತುಂಬಿಕೊಂಡು ಶಾಲಿವಾಹನ ಶಕೆ 1869 ಪಾಲ್ಗುಣ ಶುಕ್ಲ ಪಕ್ಷ ಚತುರ್ದಶಿಯ ದಿನ ಇಸ್ಸಾಮೊದ್ದಿನನ ಜೊತೆ ಬಸವಕಲ್ಯಾಣಕ್ಕೆ ಬಜಾರಕ್ಕೆ ಬಂದರು. ಹೋದ ರೈತರು ತಮ್ಮ ದವಸ ಧಾನ್ಯಗಳನ್ನು ಬಜಾರದಲ್ಲಿ ಮಾರಿ ಬೇಕಾದ ದಿನಸಿ ವಸ್ತುಗಳನ್ನ ತೆಗೆದುಕೊಂಡು ಅಂದಿನ ರಾತ್ರಿ ಅಲ್ಲಿಯೆ ಉಳಿದುಕೊಂಡು ಬೆಳಗಿನ 4ರ ಸುಮಾರಿಗೆ ಬಸವಕಲ್ಯಾದಿಂದ ಗಾಡಿಗಳನ್ನು ಕಟ್ಟುವಾಗ ಇವರಿಗಿಂತ ಮುಂಚೆ ಕುಟೇಗಾಂವದ ರೈತರಲ್ಲಿ 6ಗಾಡಿಗಳು ಮುಂಚಿತವಾಗಿ ಬಿಟ್ಟವು ಆ ಗಾಡಿಗಳು ಮುಚಳಂಬಿಯ ಬುದ್ದೆನ ಹಳ್ಳಕ್ಕೆ ಬಂದಾಗ ಹೊನ್ನಳ್ಳಿಯ ಬಾಬುರಾವ ಪಟೇಲರು ಅವರು ಸಂಗಡಿಗ ರೊಂದಿಗೆ ಬಂದು ಎದುರಾದರು ಆಗ ರಾಮಚೆಂದ್ರ ಘಾಟ ಬೋರಾಳರು ಎದುರಿಗೆ ಬಂದು ಗಾಡಿ ನಿಲ್ಲಿಸಿ ಎಂದು ಹೇಳಿದರು. ಆ ಗಾಡಿಯವರು ಗಾಬರಿಗೊಂಡು ಕುಂಟೆ ಗಾಂವದ ಗಾಡಿಗಳು ಇವೆ ಎಂದು ಹೇಳಿದಾಗ ಆ ಗಾಡಿಗಳನ್ನು ಹೋಗಲು ಬಿಟ್ಟರು.[3]

ಗೋರಟಾದ ಗಾಡಿಗಳು ಧನ್ನುರಾ ಗ್ರಾಮಕ್ಕೆ ಬರಲು ಈ ಸುದ್ದಿಯು ತಿಳಿಯಿತು. ಆಗ ಇಸಾಮೊದ್ದಿನ ಕಲ್ಲನ್ನು ಆರಿಸಿ ಗಾಡಿಯಲ್ಲಿ ಹಾಕಿಸಿದ ಗಾಡಿ ನಸುಕಿನಲ್ಲಿ ಮುಚಳಂಬಿಯ ಬುದ್ದೇನ ಹಳ್ಳಕ್ಕೆ ಬರಲು ಗಾಡಿ ನಿಲ್ಲಿಸಿ ಎಂದು ರಾಮಚೆಂದ್ರ ಘಾಟಭೊರಾಳ ಹೇಳಿದ ಆಗ ಗಾಡಿಗಳು ಅಲ್ಲೆ ನಿಂತವು ಮಧ್ಯದ ಗಾಡಿಯಲ್ಲಿ ಇಸ್ಸಾಮೊದ್ದಿನ ಅಡಗಿಕೊಂಡು ಕುಳಿತಿದ್ದನು ಆಗ ಕಳ್ಳರು ಬಂದರು ಎಂದು ತಿಳಿದು ಕಲ್ಲು ತೂರಾಟ ಮಾಡಲು ಗಾಡಿಯಲ್ಲಿನ ಜನರಿಗೆ ಹೇಳಿದ ಇಂತಹ ಸಮಯದಲ್ಲಿ ಆ ಪ್ರಮುಖರು ಕಂಬಳಿಯನ್ನು ಮುಖದ ಮೇಲೆ ಮರೆ ಮಾಡಿಕೊಂಡು ಕಲ್ಲಿನ ಪೆಟ್ಟು ತಿನ್ನುತ ಇಸ್ಸಾಮೊದ್ದಿನ ಹತ್ತಿರ ಬಂದರು ಆಗ ಅವನ ಕೈಯಲ್ಲಿ ಎರಡು ನಳಿಯ ಬೀಜಲೋಟ ಬಾರ ಇತ್ತು ಅವರ ದುರ್ದೈವಕ್ಕೆ ತೋಟಗಳು ಹಾರಿಸಿದರು.ಹಾರಲಿಲ್ಲ ಧೈರ್ಯಗುಂದಿದ ಇಸ್ಸಾಮೊದ್ದಿನಿನ ಕೈಯಲ್ಲಿರುವ ಬೀಜಲೋಟಕ್ಕೆ ಕಸಿದುಕೊಂಡು ಹಾಳ ಗೋರ್ಟದ ವಿಠೊಬಾ ದೃತಿ ಗೆಟ್ಟು ಇಸ್ಸಾಮೊದ್ದಿನನ ಬಂದುಕಿನ ನಳಿ ಕೈಯಲ್ಲಿ ಹಿಡಿದು ತಿರುವಿ ಇಸ್ಸಾಮೊದ್ದಿನನ ತಲೆಯಲ್ಲಿ ಬೀಜಲೋಟದ ತುಂಬಿನಿಂದ ಹೊಡೆದಾಗ ಇಸ್ಸಾಮೊದ್ದಿನ ನೆಲಕ್ಕುರುಳಿದ ಕೂಡಲೆ ಅವನನ್ನು ಗುಂಡಿಟ್ಟು ಕೊಲ್ಲಲಾಯಿತು. ಈ ಸುದ್ದಿ

ಇಸ್ಲಾಮೊದ್ದಿನಿನ ಜೊತೆಯಿರುವ ಮಹಮದ್ ಅನ್ನುವವನ್ನು ಈ ದೃಶ್ಯಕಂಡು ಅಂಜಿ ಓಡುವಾಗ ಅವನನ್ನ ಹಿಡಿದು ಹೊಡೆದು ಜೀವ ಹೋಗಿರುವ್ಯದೆಂದು ತಿಳಿದು ಗಾಡಿಯಲ್ಲಿ ಒಗೆದರು ಆದರೆ ಅವನ ಜೀವ ಉಳಿಯಿತು ಈ ಒಂದು ಸಂತೋಷದಿಂದ ಭಾವುವರಾವ ಪಟೇಲರು ಜೈಹಿಂದ ಬೋಲೋ ಭಾರತ ಮಾತಾ ಕಿ ಜೈ ಎಂದು ಘೋಷಣೆ ಮಾಡಿ ಎಲ್ಲರನ್ನು ತಮ್ಮ ಪರಿಚಯ ಮಾಡಿ ಕೊಟ್ಟರು. ಇನ್ನು ಮುಂದೆ ನಿವೆಲ್ಲ ಓಡಿ ಹೋಗಿರಿ ನಿಮ್ಮ ನಿಮ್ಮ ಜೀವನವನ್ನು ಉಳಿಸಿಕೊಳ್ಳಿ ಎಂದು ಹೇಳಿದ[3].

ಈ ಸುದ್ದಿ ಕಾಳ್ಗಿಚ್ಚಿನಂತೆ ಎಲ್ಲಾ ಕಡೆ ಪಸರಿಸಿತು. ಗೋರಟಾದ ಎಲ್ಲಾ ಮುಸಲ್ಮಾನರು ಸರ್ಕಾರದೊಂದಿಗೆ ಇಸ್ಲಾಮೊದ್ದಿನ ಶವ ಇರುವ ಮುಚಳಂಬಿಯ ಬುದ್ದೆನ ಹಳ್ಳಕ್ಕೆ ಬಂದರು.
ಆಗ ಶವದ ಹತ್ತಿರ ಗೆಳೆಯ ರಾಮಶೆಟ್ಟಪ್ಪಾ ಚಿದ್ರಿ ಕುಳಿತ್ತಿದ್ದ ಅಲ್ಲಿ ಬಂದಿರುವ ಸರ್ಕಲ ಹಾಗು ಅಮೀನರು ಘಟನೆಯ ಸುದ್ದಿಯನ್ನು ಕೇಳಿದರು. ಆಗ ಚಿದ್ರೆಯವರು ಇಸ್ಲಾಮೊದ್ದಿನ ಜೊತೆ ಎಲ್ಲಾ ರೈತರು ಗಾಡಿ ಕಟ್ಟಿಕೊಂಡು ಕಲ್ಯಾಣಕ್ಕ ಹೋಗಿ ಬರುವಾಗ ಮುಚಳಂಬಿಯ ಬುದ್ದೆನ ಹಳ್ಳದಲ್ಲಿ ಇಸ್ಲಾಮೊದ್ದನನ್ನು ಬಾವುರಪಟೇಲರು ಮತ್ತು ಅವರ ಗೆಳೆಯರು ಕುಡಿಕೊಂಡು ಇಸ್ಲಾಮೊದ್ದಿನನ್ನು ಕೊಲೆ ಮಾಡಿದ್ದಾರೆ ಎನ್ನುವ ನಿಜ ಸ್ಥಿತಿಯನ್ನು ತಿಳಿಸಿದ ಆಗ ಇಸ್ಲಾಮೊದ್ದಿನನ ಶವವನ್ನು ತೆಗೆದುಕೊಂಡು ಗೋಟಾ ಗ್ರಾಮಕ್ಕೆ ತಂದರು ಆ ಶವದ ಪಂಚನಾಮೆ ವಿಚಾರಣೆಯಲ್ಲಿಯೆ ಕಳೆದು ಮರುದಿನ ಇಸ್ಲಾಮೊದ್ದಿನನ ಶವ ಸಂಸ್ಕಾರಕ್ಕೆ ನಿಜಾಮ ಸರ್ಕಾರ ಅನುಮತಿ ನಿಡಿತು.ಈ ಶವ ಸಂಸ್ಕಾರ ಮಾಡಲು ಸುತ್ತಮುತ್ತಲಿನ ಗ್ರಾಮದ ಇಸ್ಲಾಮಿಯರು ಗೋರ್ಟಾಕ್ಕೆ ಬಂದು ತೆಕೆ ಎನ್ನುವಂತಹ ಸ್ಥಳದಲ್ಲಿ ಅಂತ್ಯಕ್ರಿಯೆ ಮಾಡಿದರು.ಆಗ ಸಾಕ್ಷಿಯಾಗಿ ವಿಷಯವನ್ನು ತಿಳಿಸಿದ ರಾಮಶೆಟ್ಟಪ್ಪಾ ಚಿದ್ರೆಗೆ 12ದಿವಸದ ತಪಾಸಣೆ ಮಾಡಿ ಆತನನ್ನು ಮರೆಯಾಗು ಎಂದು ಹೇಳಿದರು ರಾಮಶೆಟ್ಟಪ್ಪನ್ನು ರಾತ್ರಿಯಲ್ಲಿ ತಾಯಿಗೆ ತಿಳಿಸಿ ಅಡವಿಗೆ ಹೋಗಿ ಮರೆಯಾಗಿ ಹೆಗೆ ಪಾರಾಗುವೆಂದು ಮುರು ದಿವಸ ಅನ್ನ ನೀರು ಮುಟ್ಟದೆ ನಿಜಾಮ ರಾಜ್ಯದಿಂದ ಸೋಲಾಪುರಕ್ಕೆ ಹೋದರು.[4]

## ಹಿಂದುಗಳ ಬರ್ಬರ ಹತ್ಯೆ

ಊರಲ್ಲಿ ನವತರುಣರು ಆ ದಿನ ಕಂಡ ಕಂಡ ದಾರಿಯಿಂದ ನಿಜಾಮ ರಾಜ್ಯದ ಸರಹದ್ದು ದಾಟಿ ಸೋಲಾಪುರದ ಕಡೆಗೆ ಹೋದರು ಡುಮಣೆ ಮನೆತನದ ಮಾದಪ್ಪನವರು ತಮ್ಮ ಮನೆ

ಹೊಲಗಳನ್ನು ಆಳುಗಳ ಜವಬ್ದಾರಿಗೆ ಬಿಟ್ಟು ನಿಜಾಮ ರಾಜ್ಯದ ಸರಹದ್ದನ್ನು ಪಾರು ಮಾಡಿ ಇವರು ಕೂಡಾ ಸೋಲಾಪುರದ ಕಡೆಗೆ ಬಂದರು ಇಸ್ಲಾಮುದ್ದಿನನ್ನು ಹೋಳಿ ಹುಣ್ಣಿಮೆ ದಿನ ಹೊಡೆದ್ದಿದ್ದರಿಂದ ಗೋರ್ಟಾದಲ್ಲಿ ಭಯಂಕರ ಕೋಲಾಹಲ ಉಂಟಾಯಿತು ಇಂತಹ ಸಂಧರ್ಬದಲ್ಲಿ ಮುಸಲ್ಮಾನರು ಸಿಕ್ಕವರನ್ನು ಹೊಡೆಯಲು ಸುರು ಮಾಡಿದರು ಒಂದು ದಿನ ಗುರಪ್ಪ ತಂದೆ ಬಸವಂತರಾಯ ಬಿರಾದಾರ ರವರು ಹೊಲಕ್ಕೆ ಹೋಗಿ ಬರುವಾಗ ದಾರಿಯಲ್ಲಿ ಬಂದುಕಿನಿಂದ ಹೊಡೆದರು.ಆ ಶವವನ್ನು ಎಳೆದುಕೊಂಡು ಪಕ್ಕದಲ್ಲಿ ಬರುವ ಹಳ್ಳದಲ್ಲಿ ಸೊಂಟದ ಮಟ್ಟ ನೀರಿನಲ್ಲಿ ಮುಳುಗಿಸಿ ಮೇಲೆ ಕಲ್ಲುಗಳನ್ನು ಹೇರಿ ಹೊರಟು ಹೊದರು. ಆಗ ಗುರಪ್ಪನವರ ಮನೆಯವರು ಸಂಜೆಯಾದರು ಬರಲಿಲ್ಲ ಎಂದು ಪರೇಶಾನಿ ಆಗಿ ಹುಡುಕ ತೊಡಗಿದರು. ಆಗ ಹಳ್ಳಕ್ಕೆ ದನಗಳನ್ನು ನೀರು ಕುಡಿಸಲು ಬಂದ ವೀರಪ್ಪ ಅಕ್ಕಣ್ಣನವರು ಈ ಶವವನ್ನು ಕಂಡು ಗುರಪ್ಪ ನವರ ಮನಯಲ್ಲಿ ತಿಳಿಸಿದರು.ಆಗ ಶವವನ್ನು ಗಾಡಿಯಲ್ಲಿ ಹಾಕಿಕೊಂಡು ಅವರ ಅಣ್ಣ ಮಹಾರುದ್ರಪ್ಪ ಮತ್ತು ಆ ಊರಿನ ಚವಡಿಯಲ್ಲಿದ್ದ ಪೋಲಿಸರು ಮನೆಗೆ ಶವವನ್ನು ತರಕೂಡದೆ ಪಂಚನಾಮಗೆ ದುಬಲಗುಂಡಿಗೆ ಖಳಿಸಿದರು. ಪಂಚನಾಮೆ ಮಾಡಿದ ನಂತರ ಗೋರ್ಟಾಗೆ ತಂದು ಅಚಿತಿಮ ಸಂಸ್ಕಾರವನ್ನು ಮಾಡಲಾಯಿತು. ಇಂತಹ ಮುಸಲ್ಮಾನರ ಹಾವಳಿಯಲ್ಲಿ ಎತ್ತ ನೋಡಿದರತ್ತ ಧಂಗೆ ಸುಲಗೆ ಹೆಣ್ಣು ಮಕ್ಕಳ ಮಾನಭಂಗ ಮುಂತಾದ ಪ್ರಸಂಗಗಳು ನಡೆದವು. ಈ ಘಟನೆಯನ್ನು ತಡೆಯಲು ಗೋರ್ಟಾದ ಪ್ರಮುಖರಲ್ಲಿ ನಾಗಪ್ಪಾ ಬಸಪ್ಪಾ ಹಳೆಂಬರ ಹಾಗು ರೇವಣಯ್ಯಾ ಶಿವಲಿಂಗಯ್ಯ ನವರು ಮದ್ದು ಗುಂಡುಗಳನ್ನು ಗೋಲಿಗಳನ್ನು ತರಲು ಮದ್ದಿನ ವಾಡಿಗೆ ಹೋಗಿ ರಾತೋ ರಾತ್ರೀ ಡುಮಣೆ ಸಾಹುಕಾರವರ ಮನೆಯಲ್ಲಿ ತಂದು ಜಮ ಮಾಡಿದರು. ಇಂತಹ ಕೆಲಸವನ್ನು ಜೀವದ ಮೇಲೆ ಆಸೆ ಇಟ್ಟುಕೊಳ್ಳದೆ ಮಾಡುತ್ತಿದ್ದರು.[3]

ಗೋರ್ಟಾ ಮುಸಲ್ಮಾನರು ಸುತ್ತಮುತ್ತಲಿರುವ ಗ್ರಾಮದ ಅಂದರೆ ಬಸವಕಲ್ಯಾಣ ಮುಚಳಂಬ, ತೊಗಲೂರು, ರಾಚಪ್ಪ, ಗೌಡಗಾಂವ, ಭಾಲ್ಕಿ ,ಹುಮನಾಬಾದ,ದುಬಳಗುಂಡಿ, ವರವಟ್ಟಿ, ಘಾಟಬೋರಾಳ, ರಾಯಪಳ್ಳಿ, ರಾಜೋಳ, ಕನಕಟ್ಟಾ, ಹುಣಸನಾಳ, ರಾಜೇಶ್ವರ, ಈ ಎಲ್ಲಾ ಗ್ರಾಮದ ಮುಸಲ್ಮಾನರು ರಜಾಕರರ ಜೊತೆ ಗೂಡಿ ಘೋಡವಾಡಿ ಒಂದು ಸಭೆಯನ್ನು ಕರೆದು ಗೋರ್ಟಾದ ಮೇಲೆ ಧಂಗೆ ಏಳೋಣ ಮತ್ತು ಗೋರ್ಟಾವನ್ನು ಸಂಪೂರ್ಣ ಲೂಟಿ ಮಾಡಿ ಹಿಂದೂಗಳ ಪ್ರಾಣ ತೆಗೆದುಕೊಳ್ಳೋಣ ವಿಚಾರಿಸಿ ನಿರ್ಧಾರ ತೆಗೆದುಕೊಂಡರು .

ಆ ದಿನ ಶಾಲಿವಾಹನ ಶಕೆ 1870 ಅಂದರೆ ದಿನಾಂಕ 09.05.1948 ಚೈತ್ರ ಕೃಷ್ಣ ಪಕ್ಷೆ ಅಮವಾಸೆಯ ದಿನ ಮುಂಜಾನೆ ಸೂರ್ಯಗಹ್ರಣ ಮುಗಿದು ಜನರೆಲ್ಲರು ಅಡುಗೆ ಮಾಡುವದರಲ್ಲಿ ತಲ್ಲಿನರಾಗಿದ್ದು ಆ ಸಮಯದಲ್ಲಿ ಮುಸಲ್ಮಾನ ದಂಗೆ ಕೋರರು ಗುಂಪು ಗುಂಪಾಗಿ ಗೋರ್ಟಾ ಗ್ರಾಮಕ್ಕೆ ಬರತೊಡಗಿದರು ಬಂದುಕುಗಳ ಶಬ್ದವನ್ನು ಮಾಡುತ್ತಾ ಗೋರ್ಟಾ ಗ್ರಾಮದ ಊರೊಳಗೆ ನುಗ್ಗಿದರು ಈ ಶಬ್ದವನ್ನು ಕೇಳಿ ಊರಿನ ಜನ ತಮ್ಮ ಮಹಡಿಗಳ ಮೇಲೆ ಏರ ತೊಡಗಿದರು ಮುಂದೆ ಗ್ರಾಮದ ಸುತ್ತ ಎತ್ತ ನೋಡಿದರು ಕೋಲಾಹಲವೇ ಎದ್ದಿತು. ಘೋರವಾಡಿ ದಾರಿಯಿಂದ ಬರುವ ಮುಸಲ್ಮಾನರು ಹೊಲಕ್ಕೆ ಹೋಗಿದ್ದ ಶಿವಪ್ಪ ಶಾಂತಪ್ಪ ನಿಂಬೆಯನ್ನು ಹೊಡೆದು ಕ್ಷಣಕಿಯ ಬಣವೆಯಲ್ಲಿ ಉರಿ ಹಚ್ಚಿದರು. ಊರಲ್ಲಿ ಕೋಟೆಯಂತಿದ್ದ ಮಹಾದಪ್ಪ ಡುಮಣೆ ಅವರ ಮನೆಯಲ್ಲಿ ಊರಿನ ಜನ ತಮ್ಮ ಜೀವವನ್ನು ಉಳಿಸಿಕೊಳ್ಳಲು ಅವರ ಮನೆಯಲ್ಲಿ ಸೇರಿದರು. ಆ ಸಮಯದಲ್ಲಿ ಡುಮಣೆ ಅವರ ಮನೆಗೆ ಹೋಗಬೇಕೆಂದಿದ್ದ ಮಾರ್ತಪ್ಪ ಕೋಣೆ ಅವರನ್ನು ಗೋಲಿಬಾರ ಮಾಡಿ ಅವರನ್ನು ಕೋಲೆ ಮಾಡಲಾಯಿತು. ಆಗ ಹಿಂದೂಗಳು ಡುಮಣೆ ಅವರ ಮನೆಯಲ್ಲಿ ನಿಂತು ಮುಸಲ್ಮಾನನ್ನು ಬರಕೊಡದೆ ಮಹಡಿಯ ಕಂಬಿಗಳಿಗೆ ಮರದ ಹಲಿಗೆ ನಿಲ್ಲಿಸಿ ಬಂದೂಕಿನಿಂದ ಗೋಲಿಬಾರ ಮಾಡುತ್ತಾ ಮತ್ತು ಕರಾಬಿನಲ್ಲಿ ಭರೆ ಥುಂಬಿ ಹಾರಿಸುತ್ತಾ ಹಿಂದೂಗಳಿಗೆ ಒಳಗೆ ಏಳಿಯುತ್ತಾ ನಡೆದರು ಡುಮಣೆ ಮಹಡಿಯಲ್ಲಿ ಪ್ರಮುಖರಾದ ಬಹದ್ದೂರ ನಾಗಪ್ಪಾ ಹಳೆಂಬರ ಕಾಶಪ್ಪಾ ಭಾಲ್ಕೆ ಸಿದ್ರಮಪ್ಪಾ ಪಟ್ನೆ ಮಹಾರುದ್ರಪ್ಪ ಪಟ್ನೆ ವಿಥ್ಠಲರಾವ ನಿರೋಡೆ ಮುಂತಾದವರು ಕುಡಿಕೊಂಡು ಮುಸಲ್ಮಾನರ ವಿರುದ್ದ ದಾಳಿ ನಡೆಸಿದರು ಇಂತಹ ಸಮಯದಲ್ಲಿ ಒಡುತ್ತ ಬರುತ್ತಿರುವ ಮಲಶೆಟ್ಟಪ್ಪಾ ಜಗಶೆಟ್ಟಿ ಈತನಿಗೆ ಹೊರಗಿನಿಂದ ಬಂದ ಗೋಲಿ ತಗುಲಿ ಪ್ರಾಣ ಬಿಟ್ಟ ಈತನ ಶವವನ್ನು ಎಳೆದುಕೊಂಡು ಡುವ್ಮಣೆಯವರ ಮನೆಯಲ್ಲಿ ಹಾಕಲಾಯಿತು.ಅದೇ ರಿತಿ ಚೆನ್ನಪ್ಪಾ ಬಿರಾದಾರ ಅವರನ್ನು ಆಕಸ್ಮಿಕವಾಗಿ ಗೋಲಿ ತಗುಲಿ ಅವರು ಕೊನೆ ಉಸಿರೆಳೆದರು. ಈ ಸಮಯದಲ್ಲಿ ಡುಮಣೆ ಮನೆಯಲ್ಲಿರುವ ಗಂಡಸರು ಮಹಡಿ ಮೇಲೆ ನಿಂತು ಕವಣೆಯಿಂದ ಹೊಡೆಯುತ್ತಿದ್ದರು. ಈ ಪ್ರಕಾರ ಮುಂಜಾನೆ 9ಗಂಟೆಗೆ ಈ ದುರಂತ ಶುರುವಾದ ಆ ದಿನ ಮುಗಿಯುವವರೆಗು ನಡೆಯಿತು.

ಆಗ ಊರಿನ ಪ್ರಮುಖ ರಾಚಯ್ಯ ಮಠಪತಿ ಅವರು ಮತ್ತು ನವತರುಣ ದಿವ್ಯ ಪಂಡಿತರು ರೇವಣಸಿದ್ದಯ್ಯ ಅವರು ಧಂಗೆ ಕೋರ ಶಬ್ದ ಕೇಳಿ ಕತ್ತಲೆ ಕೋಣೆಯಲ್ಲಿ ಕೂಡಿಸಿದರು. ಆಗ ಅವರಿಬ್ಬರು ಮಹಡಿಯ ಮೇಲೆ ಹೋಗಿ ಕಲ್ಲು ಹೊಡೆಯ ತೊಡಗಿದರು.ಆ ಸಮಯದಲ್ಲಿ ಮಠದ ಓತ್ತಲಿನಲ್ಲಿ ಇರುವ ಕಣಕಿ ಭಣವೆಗೆ ಮುಸಲ್ಮಾನರು ಭೆಂಕಿ ಹಚ್ಚಿದರು ಆ ಭೆಂಕಿಯ ಜ್ವಾಲೆ ಮಹಡಿ ಮೇಲೆರುವ ರಾಚಯ್ಯ ಮತ್ತು ಹಾವಗೆಪ್ಪ ಎನ್ನುವರೆಗೆ ಕಾವು ತಗುಲಿ ಕೆಳಗಿಳಿದು ಬಂದರು. ಆಗ

ಮುಸಲ್ಮಾನರು ಮಠಕ್ಕೆ ಬಂದು ಭಾಗಿಲು ತೆಗೆಯಿರಿ ನಿಮಗೇನು ಮಾಡುವದಿಲ್ಲ ಎಂದು ಒದರಿದರು ಆಗ ಒಳಗಿರುವ ರಾಚಯ್ಯ ಸ್ವಾಮಿ ಮುಂದೆ ಬಂದು ಬಾಗಿಲು ತೆರೆಯುವಷ್ಟರಲ್ಲಿ ಮುಸಲ್ಮಾನರ ತಂಡದಲ್ಲಿರುವ ಎಮ್ಮಿ ಮಸ್ತಾನ, ಎಂಬ ರಜಾಕರ ಬರ್ಚಿಯಿಂದ ರಾಚಯ್ಯಸ್ವಾಮಿಯ ಹೊಟ್ಟೆಗೆ ತಿವಿದ. ತಿವದರು ಕೂಡಾ ಬಿಡದೆ ಆತನನ್ನು ಹೊಡೆತೊಡಗಿದರು. ಆಗ ಒಂದೆ ಮಾತರಂ ಎಂಬ ಜಯಘೋಷದೊಂದಿಗೆ ಮಠಪತಿ ಯವರು ತಮ್ಮ ಪ್ರಾಣವನ್ನು ಬಿಟ್ಟರು ಇನ್ನೊರ್ವ ವ್ಯಕ್ತಿಯಾದ ಹಾವಗೆಪ್ಪನನ್ನು ಹಿಡಿದು ಅವನನ್ನು ಚಾಕುವಿನಿಂದ ತಿವಿದು ಸತ್ತರೆಂದು ತಿಳಿದು ಅವರಿಬ್ಬರ ಶವವನ್ನು ಪರಖಾನಿಯಲ್ಲಿ ಹಾಕಿ ಉರಿ ಹಚ್ಚಿದರು.ಆಗ ಹಾವಗೆಪ್ಪ ನರಳುತ್ತಾ ಬದುಕಿ ಉಳಿದ ಮುಂದೆ ಶಂಕರೆಪ್ಪ ಪತಂಗೆ ಎನ್ನುವವರು ತಮ್ಮ ಮನೆಯ ಹಿಂದೆ ಬರುವ ಫಕೀರರ ಮನೆಯಲ್ಲಿ ಅಡುಗಿ ಕುಳಿತ್ತಿದ್ದು. ಅವನನ್ನು ಹುಡುಕುತ್ತ ಮುಸಲ್ಮಾನ ರಜಾಕಾರರು ಆ ಮನೆಗ ಬಂದು ಕೇಳಿದಾಗ ಒರ್ವ ಹೆಣ್ಣುಮಗಳು ಒಬ್ಬನು ಬಂದು ಅಡಗಿ ಕುಳಿತ್ತಿದ್ದಾನೆ ಎಂದು ತಿಳಿಸಿದಳು. ಆಗ ಶೆಂಕರೆಪ್ಪ ಪತಂಗೆ ಮನೆಯ ಕಡೆ ಒಡ ತೊಡಗಿದ ಆದರು ಬಿಡದೆ ಅವನನ್ನು ತಲವಾರದಿಂದ ಹೊಡೆದು ಅವನ ಸತ್ತನೆಂದು ತಿಳಿದು ಭೆಂಕಿ ಹಚ್ಚಿ ಹೊರಟುಹೊದರು ಆ ದಿನ ರಾತ್ರಿ 12:00ಗಂಟೆಗೆ ಶೆಂಕರೆಪ್ಪನಿಗೆ ಸ್ಮೃತಿ ಬಂದು ಆತ ಹೊನ್ನಳಿಗೆ ಹೋಗೊಣ ಎಂದು ಇಚ್ಛಯಿಸಿ ಹೊರಟನು ಆಗ ಹೊನ್ನಳಿಯ ಮಾವನವರ ಮನೆಗೆ ಬಂದು ಮುಟ್ಟಿದರು ತಕ್ಷಣವಾಗಿ ಆತನನ್ನು ಬೀದರ ದವಖಾನೆ ತೆಗೆದುಕೊಂಡು ಹೋದರು ದವಾಖಾನೆಯಲ್ಲಿ ಉಪಚಾರ ಪಡೆದು ಸೋಲಾಪುರಕ್ಕೆ ಬಂದರು ಮುಂದೆ ಧುಳಪ್ಪಾ ಕಣಜಿ ಎನ್ನುವರು ಭಹಳ ಸಜ್ಜನ ವ್ಯಕ್ತಿ ಅವರ ಮನೆಯನ್ನು ಮುಸಲ್ಮಾನರು ಲುಟಿ ಮಾಡಿ ಅವರನ್ನು ಗುಂಡಿಟ್ಟು ಕೊಂದರು ಆಮೇಲೆ ಶಿವಪ್ಪ ಮೇತ್ರೆ ಇವರನ್ನು ಮುಸಲ್ಮಾನರು ಹೊಡೆದು ಮನೆಯನ್ನು ಲೂಟಿ ಮಾಡಿ ಅವರನ್ನು ಮನೆಯಲ್ಲಿಯೆ ಉರಿಹಚ್ಚಿ ಹೋದರು.ಆಮೇಲೆ ಗುರಪ್ಪ ಕಣಜೆ ಗೋರ್ಟಾ ಗ್ರಾಮದಲ್ಲಿಯೆ ಒಬ್ಬ ದೊಡ್ಡ ರೈತ ಮಹಾದಾನಿ ಮತ್ತು ಗ್ರಾಮದ ಯುವ ಗೋರಕ್ಷನ ಭಜನೆ ಮತ್ತು ಅನ್ನದಾನ ಮಾಡುತ್ತಿದ್ದರು ಇಂತಹ ಮಹಾನ ವ್ಯಕ್ತಿಯನ್ನು ಮುಸಲ್ಮಾನ ರಜಾಕರರು ಕೊಂದು ಅವರ ಮಹಡಿಯಲ್ಲಿಯೆ ಭೆಂಕಿ ಹಚ್ಚಿ ಹೋದರು ಇನ್ನೋರ್ವ ವ್ಯಕ್ತಿಯಾದ ಭೀಮಣ್ಣಾ ರಾಜೋಳೆ ಸದಾ ದೇವರ ಭಜನೆಯಲ್ಲಿ ಏಕತಾರಿಹಿಡಿದು ಹಣೆಯಲ್ಲಿ ವಿಭೂತಿ ಕೊರಳಲ್ಲಿ ರದ್ರಾಕ್ಷಿ ಧರಿಸಿ ಸರಳ ಸಜ್ಜನಿಕೆಯಿಂದ ಇರುತ್ತಿದ್ದರು. ಇಂತಹ ವ್ಯಕ್ತಿಯನ್ನು ಮುಸಲ್ಮಾನ ರಜಾಕಾರರು ಗುಂಡಿಟ್ಟು ಕೊಂದರು. ಮುಂದೆ ಶರಣಪ್ಪಾ ಕನಕಟ್ಟೆ ಎಂಬ ರೈತ ಬಲಿಷ್ಟ ದೇಹವನ್ನು ಹೊಂದಿದ್ದು ನಾಲ್ಕಾರು ಜನರನ್ನು

ಮಣಿಸುವ ಶಕ್ತಿಯನ್ನು ಹೊಂದಿದ್ದ ಇಂತಹ ವ್ಯಕ್ತಿಯನ್ನು ಹಿಂದಿನಿಂದ ಬಂದು ರಜಾಕಾರರು ಗೋಲಿ ಹಾಕಿದರು. ಆಗ ಆತನ ಜೀವ ಉಸಿರಾಡುತ್ತಿತ್ತು. ಇದನ್ನು ಕಂಡು ಅವನನ್ನು ಎಳೆದು ಒಯ್ದು ಮುಕ್ತೆದಾರರ ಹೊಲದಲ್ಲಿ ಹಾಕಿ ಊರಿ ಹಚ್ಚಿದರು ಆಮೇಲೆ ಶಾಮ್ಮರಾಯ ಪಟ್ನೆ ಎನ್ನವವರು ತಮ್ಮ ಓಣಿಯನ್ನು ಬಿಟ್ಟು ಇಳಿದು ಏಲ್ಲಿಯಾದರು ಓಡಿ ಹೋಗೋಣ ಎಂದು ಓಡುವಾಗ ಧೂರಿನಿಂದ ಮುಸಲ್ಮಾನರು ಬಂದುಕಿನಿಂದ ಹೊಡೆದು ಆತನನ್ನು ಕೊಲೆ ಮಾಡಿದರು.ಮುಂದೆ ರಾಮರಾವ ಕುಲಕರ್ಣಿ ಇವರು ವಿದ್ವಾಂಸರು ಬಿ.ಎ.ಪದವಿಗರರು ಮೋಡಿ ಅಕ್ಷರಗಳನ್ನು ಬರೆಯುತ್ತಿದ್ದ ಈ ವ್ಯಕ್ತಿ ಮರಾಠಿ ಉರ್ದು ,ಇಂಗ್ಲೀಷ್, ಕನ್ನಡ ಸಹ ಒದಿ ಬರೆಯುತ್ತಿದ್ದರು. ಇಂತಹ ಶೀಲ ಭ್ರಾಹ್ಮಣರಾದ ಇವರ ಹತ್ತಿರ ಕೆಲವು ಜನ ವಕೀಲರಾಗಿ ಕೆಲವು ಜನ ಮಾಸ್ತರರಾಗಿ ಅವರಲ್ಲಿ ಹಣಮಂತರಾಯ ಗೌಡಗಾಂವದ ವಕೀಲ, ಬಾಬುರಾವ ಹೊನ್ನಳ್ಳಿ, ವಕೀಲ, ಮತ್ತು ಲೋಕನಾಯಕ ಭೀಮಣ್ಣ ಖಂಡ್ರೆಯವರು ಕೂಡಾ ಇವರ ಅಡಿಯಲ್ಲಿಯೇ ವಿದ್ಯಾಬ್ಯಾಸ ಮಾಡಿದವರು.ಹೀಗಾಗಿ ಇಂತಹ ಮಹಾತ್ಮರನ್ನ ಮುಸಲ್ಮಾನ ರಜಾಕಾರರು ಏಳೆದೊಯ್ದು ಕಾಲಿಗೆ ಹಗ್ಗ ಕಟ್ಟಿ ಕುಳಭಾನ ಭೆಂಕಿಯಲ್ಲಿ ಒಗೆದು ಹೋದರು. "ದೇಶಸೇವೆಯ ಖಣಿ ಮಾತೃ ಭೂಮಿಗೆ ಧಣಿ" ಇಂತಹ ವ್ಯಕ್ತಿ ಗೋರ್ಟಾದ ಆಚಾರ್ಯ ಬ್ರಾಹ್ಮಣ್ಣರಾಗಿ ನಮ್ಮೆದರು ಇಲ್ಲದಂತಾಗಿದೆ.[!]

ಪೂಜ್ಯ ಮಾತೊಶ್ರೀ ವಿಮಲಾಬಾಯಿ ರಾಮಭಟ್ಟಜಿ ಇವರ ಮನೆಯ ಹೊಕ್ಕ ಮುಸಲ್ಮಾನ ರಜಾಕಾರರು ತಾಯಿಯ ವಿರುಧ್ಧ ಕೆಟ್ಟ ವೃತ್ತಿಗಿಳಿದು ಮಾನ ಹಾನಿಗಿಳಿದು ಭಹಳ ಸಂಕಷ್ಟಕ್ಕೆ ಇಡುಮಾಡಿದರು ಇಂತಹ ಘಟನ ಭಹಳ ದುಖದಿಂದ ಬರೆಯುತ್ತಿದ್ದು ಮುಂದಿನ ಪಿಳಿಗೆಗಳಿಗೆ ಈ ದುಷ್ಕೃತ್ಯ ತಿಳಿಯಲು.

ಈ ಸುದ್ದಿ ತಿಳಿದು ಗುರುಪಾದಯ್ಯ ಸ್ವಾಮಿಯವರು ವಿಮಲಾಬಾಯಿ ಅವರ ಮನೆಗೆ ಬಂದು ನೋಡಿದಾಗ ಅವರು ನಿವೆಲ್ಲ ಹಾಳಾಗಿ ಹೋಗಿರೊ ಎಂದು ದುಖದಿಂದ ಹೇಳುವಾಗ ಆತನ ಗಡ್ಡಕ್ಕೆ ಊರಿ ಹಚ್ಚಿ ಸಾಯುವನೆಂದು ಬಿಟ್ಟು ಹೋದರು ಆದರೆ ಆತ ಗುರುವಿನ ಕೃಪೆಯಿಂದ ಬದುಕುಳಿದ ಮುಂದೆ ನಾರಾಯಣರಾವ ಮುಕ್ತೆದಾರ ಶಾಂತವಾದಿಗಳು ನ್ಯಾಯವಾದಿಗಳು ಆಗಿದ್ದು ಉರಲ್ಲಿಯ ರೈತರ ಲೆಕ್ಕ ಪತ್ರವನ್ನು ಬರೆದು ಕೊಡುತ್ತಿದ್ದರು. ಅವರ ಮನೆಯ ಎದುರಿಗೆ ಲಕ್ಷ್ಮಿ ದೇವಸ್ಥಾನ ಇದ್ದು ನಂದಾ ದೇವಿಗೆ ನಡೆಸುವ ಸಂದರ್ಭದಲ್ಲಿ ಅವರಿಗೆ ಮುಸಲ್ಮಾನರು ಗುಂಡಿಟ್ಟು ಕೊಂದು ಭೆಂಕಿಯಲ್ಲಿ

ಹಾಕಿದರು.ಆಮೇಲೆ ಊರಿನ ಮಾಲಿಗೌಡರಾದ ಬಸಪ್ಪ ಅಮೃತರಾವ ಅವರು ಮೋಡಿ ಬರೆಯುವ ಪಂಡಿತರ ಇಂತಹ ವ್ಯಕ್ತಿಯನ್ನು ಊರಿನ ಲಕ್ಷ್ಮಿ ದೇವಸ್ಥಾನದ ಹತ್ತಿರ ತಂದು ತಲವಾದಿಂದ ಕಡೆದರು ಜೀವ ಹೋಗಲಿಲ್ಲ ಆಗ ರಜಾಕಾರರ ಜೊತೆಯಲ್ಲಿರುವ ಊರಿನ ಮುಸಲ್ಮಾನೊಬ್ಬ ಈ ಗೌಡ ಭೂಸಣಕ್ಕಿ ಮುತ್ಯನ ಶಿಷ್ಯ ಮಂತ್ರ ತಂತ್ರ ಬಲ್ಲವನು ಅವನ ರಟ್ಟೆಯಲ್ಲಿ ಕಡಗವಿದೆ ತೆಗೆಯಿರಿ ಎಂದು ಹೇಳಿದ. ಆಗ ರಜಾಕಾರರು ಕಡಗವನ್ನು ತೆಗೆತಿಸಿದರು. ಆಗ ಬಸಪ್ಪ ಮಾಲೀಗೌಡರು ಜೈಲಕ್ಷ್ಮೀ ಎಂದು ಕೊನೆ ಉಸಿರೆಳೆದರು.

ಮುಂದೆ ಪೋಲಿಸ್ ಗೌಡರ ಮನೆಗೆ ಹೊಕ್ಕು ಆ ಸಮಯದಲ್ಲಿ ಗೌಡರು ಆದ ಬಸಪ್ಪ ಭೀಮರಾಯ ಪಾಟೀಲರು  ಹೆಣ್ಣು ಮಕ್ಕಳ ಸೀರೆ ಧರಿಸಿ ಅಡಗಿ ಕುಳತ್ತಿದ್ದರು. ಇವರನ್ನು ಕಂಡ ಎಳೆದುಕೊಂಡು ಬರುವಾಗ ತಾಯಿ ಗ್ಯಾನಮ್ಮ ಎಷ್ಟು ಬೇಡಿಕೊಂಡರು ಅವರನ್ನು ಲಕ್ಷ್ಮಿ ಗುಡಿಯ ಹತ್ತಿರ ತಲವಾದಿಂದ ಕಡೆದು ಭೆಂಕಿ ಹಚ್ಚಿದರು ಈ ರೀತಿಯಾಗಿ ಗೋರ್ಟಾದ ಘಟನೆ ಶಾಲಿವಾಹನ ಶಕೆ 1870 ಮಾಸದ ಕೃಷ್ಣ ಪಕ್ಷ ಅಮವಾಸ್ಯೆ ದಿನ ನಡೆದು ಪೂರ್ಣ ಉರನ್ನೆ ಸಂವಾಹಾರ ಮಾಡಿತು.

ಈ ಘಟನೆ ನಡೆದ ಸುದ್ದಿಯನ್ನು ಅಂದಿನ ಪ್ರಧಾನ ಮಂತ್ರಿ ಜವಹಾರಲಾಲ ನೆಹರು ಕೇಳಿ ಮನನೊಂದು ಕಣ್ಣಿರು ಇಟ್ಟರು ಮಿಲಿಟರಿ ಕಾರ್ಯಚರಣೆಯಲ್ಲಿ ಎಲ್ಲಾ ರಜಾಕಾರರ ಮುಸಲ್ಮಾನರು ದೊಡ್ಡ ಪಟ್ಟಣಗಳಿಗೆ ಓಡಿಹೋದರು ಗೋರ್ಟಾ ಗ್ರಾಮದ ಎಲ್ಲಾ ಹಿಂದುಗಳು ತಮ್ಮ ಮನೆಗಳಿಗೆ ಬಂದು ಸೇರಿದವು ಈ ರೀತಿಯಾಗಿ ಮತ್ತೆ ಇನ್ನೊಮ್ಮೆ ಕಳದೆ ಗತ ದಿನಗಳು ಮರುಖಳಿಸಿದವು ಒಡೆದ ಮನೆಗಳು ಕೂಡಿ ನಲಿಯಲಾರಂಭಿಸಿದವು. ಬಾಡಿದ ಹೂಗಳು ಅರಳಲಾರಂಭಿಸದವು ಸಮಾಜ ಸಮಸ್ತ ನಿನಗಾಗಿ ಎನ್ನುವದಕ್ಕಿಂತಲು ನಾನು ಸಮಾಜಕ್ಕಾಗಿ ದೇಶಕ್ಕಾಗಿ ಸಮಸ್ತಕ್ಕಾಗಿ ಎನ್ನುವ ಉಜ್ವಲ ದೇಶ ಮುಡಿ ಬಂತು ಸಂಸ್ಕಾರ ಸಂಸ್ಕೃತಿಗಳು ಮತ್ತೊಮ್ಮೆ ಗೋರ್ಟಾದಲ್ಲಿ ವಿಜೃಂಭಿಸಿದವು.

**ಐತಿಹ್ಯಗಳು:–(ಹೇಳಕೆಗಳು)**

ಗೋರ್ಟಾ(ಬಿ)ಗ್ರಾಮದ ರಜಾಕಾರರ ಹಾವಳಿಯಿಂದ ತತ್ತರಿಸಿದ ಆಗಿನ ಘಟನೆಯ ಸ್ಪಷ್ಟಚಿತ್ರಣವನ್ನು ಕಣ್ಣಿಗೆ ಕಟ್ಟುವಂತೆ ಆ ಉರಲ್ಲಿ ಬದುಕುಳಿದ ಆಗಿನ ಹಿರಿಯರು ತಿಳಿಸಿದ್ದಾರೆ,

# ಅಡಿ ಟಿಪ್ಪಣೆಗಳು

1 ವೀರೂಪಾಕ್ಷಯ್ಯಾ ಶಿವಲಿಂಗಯ್ಯಾ ಮಠಪತಿ, ಹೈದ್ರಾಬಾದ ಕರ್ನಾಟಕದ ಜಲಿಯಾನ ವಾಲಬಾಗ ಗೋರ್ಟಾ, ಪು.4–5

2 ಅದೇ, ಪು.11

3 ಅದೇ, ಪು.12

4 ಅದೇ, ಪು. 13

5 ಅದೇ, ಪು.14

6 ಅದೇ, ಪು.19

1)ಮಾಹಾದಪ್ಪ ಡುಮಣಿ

ಮಾಹದಪ್ಪ ಡುಮಣಿಯವರು ಗೋರ್ಟಾ ಗ್ರಾಮದ ಗಣ್ಯವ್ಯಕ್ತಿಗಳಾಗಿದ್ದರಲ್ಲದೆ ಆಗರ್ಭ ಶ್ರೀಮಂತರು. ಅವರು ಎಷ್ಟು ಶ್ರೀಮಂತರೋ ಅಷ್ಟೇ ಉದಾರಿಗಳೂ ಆಗಿದ್ದರು.ಊರಿಗೆ ಬಂದ ಆರ್ಯಸಮಾಜದ ಮುಖಂಡರಿಗೆಲ್ಲ ಡುಮಣಿ ಸಾಹುಕಾರರೇ ಊಟ –ವಸತಿಯ ವ್ಯವಸ್ಥೆಮಾಡುತ್ತಿದ್ದರು ಇವರು ಕಟಿಸಿದ ಮನೆ ಭವ್ಯವಾಗಿದ್ದು ಭದ್ರವಾದ ಕೋಟೆಯಂತಿದೆ ಹೈದರಬಾದ ಸ್ವಾತಂತ್ರ್ಯಯೋಧರಿಗೆ ತನುಮನಧನದಿಂದ ಸಹಾಯಮಾಡಿ ಮಹಾದೆಪ್ಪ ಡುಮಣಿಯವರು ಸುತ್ತಮುತ್ತಲಿನ ಗ್ರಾಮದವರಿಗೆ ರಜಾಕಾರರನ್ನು ಎದುರಿಸಲು ಸಹಾಯ ಮಾಡಿದ್ದರು 9ಮೇ 1948ರಮದು ರಜಾಕಾರರು ಗೋರ್ಟಾದ ಮೇಲೆ ದಾಳಿ ಮಾಡಿದ ದಿನ ಸುಮಾರ ಎಂಟೂನೂರು ಜನ ಹಿಂದೂಗಳು ಎವರ ಮನೆಯಲ್ಲಿ ಆಶ್ರಯ ಪಡೆದ ತಮ್ಮ ಜೀವ ರಕ್ಷಿಸಿಕೊಂಡರು ಮನೆಯ ಮಹಡಿಯ ಮೇಲಿಂದ ಜನರು ರಜಾಕಾರರತ್ತ ಕಲ್ಲು ಬೀಸಿದರು ಬಂದೂಕಿನಿಂದ ಗುಂಡು ಹಾರಿಸಿದರು ಆದರೂ ಅವರು ರಜಾಕಾರರನ್ನು ಎದುರಿಸುವುದು ಸಾಧ್ಯವಾಗಲಿಲ್ಲ ರಾತ್ರಿಯಾದ ಮೇಲೆ ಕತ್ತಲಲ್ಲಿ ಜನರು ಒಬ್ಬೋಬ್ಬರಂತೆ ಪಾರಗಿ ಹೋಗಿ ಬಿಜಾಪುರ,ಸೋಲ್ಲಾಪುರ, ಅಕ್ಕಲ್ಕೊಟ್ ಮುಂತಾದ ಸ್ಥಳಗಳನ್ನು ಸೇರಿಕೋಡರು .ಈ ಹಿಂದೂ ನಿರಾಶ್ರತರಿಗೆಲ್ಲ ಮಹಾದಪ್ಪ ಡುಮಣಿಯವರು ಊಟ–ವಸತಿಯ ವ್ಯವಸ್ಥೆ ಮಾಡಿದರು ಸಂಪತ್ತು ಸಮಾಜದ ಯೋದಕ್ಷೇಮಕ್ಕಾಗಿಯೆ ಇದೆ ಎಂಬ ಉದಾಹರಣೆಯನ್ನು ನಾವು ಡುಮಣಿ ಸಾಹುಕಾರರ ಜೀವನದಲ್ಲಿ ಕಾಣಬಹುದು ಸಾಲ ವಾಪಸು ಕೊಡಲಾರದ ಸ್ಥಿತಿಯಲ್ಲಿದ್ದ ಬಡರೈತರನ್ನು ಕರೆಯಿಸಿ ಅವರ ಎದುರಿಗೇ ಸಾಲಪತ್ರಗಳನ್ನು ಹರಿದುಹಾಕಿ ಸಾಲ ಮನ್ನಾ ಮಾಡಿದ ಈ ಸಾಹುಕಾರರನ್ನು ಗ್ರಾಮದ ಜನ ಇಂದಿಗೂ ಸ್ಮರಿಸಿಕೊಳ್ಳುತ್ತಾರೆ ಮಹಾದಪ್ಪನವರಂತೆ ಅವರ ಪುತ್ರ ಚೆನ್ನಬಸಪ್ಪನಚರೂ ಆದರ್ಶ ದೇಶಭಕ್ತರಾಗಿದ್ದರು ಮೈಂದರ್ಗಿ ಸ್ವಾತಂತ್ರ್ಯಯೋಧರಿಗೆ ಶಸ್ತ್ರಾಸ್ತ್ರಗಳನ್ನು ಒದಗಿಸಿ ಶೂರರು ಧೈರ್ಯಶಾಲಿ ಎಂದು ಖ್ಯಾತಿ ಪಡೆದರು.

ಪೋಲಿಸ ಕಾರ್ಯಚರಣೆಯ ನಂತರ ಮಹಾದಪ್ಪ ಡುಮಣಿಯವರು ಸ್ವಗ್ರಾಮಕ್ಕೆವಾಪಸಾಗಿ ಕೃಷಿಕಾರ್ಯದಲ್ಲಿ ತೊಡಗಿದರು, ಅವರು ಕಟ್ಟಿಸಿದ ಭವ್ಯವಾದ ಮನೆ ಒಂದು ಐತಿಹಾಸಿಕ ಸ್ವಾರಕವಆಗಿ ಗೋಪುರದಮತೆ ಊರ ಮಧ್ಯದಲ್ಲಿ ಕಂಗೊಳಿಸುತ್ತಲಿದೆ,ಎಂಟುನುರು ಜನರಿಗೆ ರಕ್ಷಣೆಕೊಟ್ಟ ಈ ಸೌಧ ಒಂದು ಪವಿತ್ರಸ್ಥಾನವೆಂದೇ ಹೇಳಬಹುದು,ರಜಾಕಾರರ ಆಕ್ರಮಣವನ್ನು ಮೂಕಸಾಕ್ಷಿಯಾಗಿ ವಿವರಿಸುವ ಈ ಮನೆ ಯಾತ್ರಿಕರಿಗೆ ಭಕ್ತಿ ಗೌರವಗಳ ಸಂಕೇತವಾಗಿದೆ,ಸ್ವಾತಂತ್ರ್ಯಯೋಧ,ಪರೋಪಕಾರಿ ಮತ್ತು ತ್ಯಾಗಿಗಳಾದ ಮಹಾದಪ್ಪ ಡುಮಣೆಯವರು ದಿನಾಂಕ 27–12–1966,ರಲ್ಲಿ ಲಿಂಗೈಕ್ಯರಾದರು.ಗೋರ್ಟಾ ಗ್ರಾಮದ ಇತಿಹಾಸದಲ್ಲಿ ಮಹಾದಪ್ಪ ಡುಮಣಿಯವರಿಗೆ ಬಹುದೊಡ್ಡ ಸ್ಥಾನವಿದೆ.

ಹೇಳಿಕೆದಾರರ ಸಹಿ

(ಮೊಮ್ಮಗ ಮಲ್ಲಿಕಾರ್ಜುನ ಡುಮಣೆ)

Mallikarjun

**ವಿಠೋಬಾ ನರಸಪ್ಪ ನಿರೋಡೆ:-**

ಈ ಸ್ವಾತಂತ್ರ ಯೋಧರು ಗೋರ್ಟಾ ಗ್ರಾಮದವರು.ಕೋಳಿ ಸಮಾಜದ ಪ್ರಮುಖ ವ್ಯಕ್ತಿಗಳು.ಹೊಲಕ್ಕೆ ಹೋಗಿದ್ದ ಈ ಸ್ವಾತಂತ್ರ್ಯಸೇನಾನಿಯನ್ನು ನಾವು ಕಾಣಲು ಕೊಂಚ ಹೊತ್ತು ಕಾಯಬೇಕಾಯಿತು.ಏನೂ ಅರಿಯದ ಮುಗ್ಧರಮತೆ ಕಾಣುತ್ತಿದ್ದ ಈ ವ್ಯಕ್ತಿಯಲ್ಲಿ ಸ್ವಾಭಿಮಾನ,ಸ್ವಾತಂತ್ರ್ಯಭಿಲಾಷೆ ತುಂಬಿತ್ತು ಎಂದು ಊಹಿಸಲು ಸಾಧ್ಯವಿರಲಿಲ್ಲ.ವಿಠೋಬಾ ತರುಣದ್ದಾಗ ದೃಡಕಾಯರು, ಧ್ಯರ್ಯಶಾಲಿಗಳು ಮತ್ತು ಅನ್ಯಾಯದ ವಿರುದ್ದ ಪ್ರತಿಭಟಿಸುವ ಕಲಿಗಳು ಆಗಿದ್ದರೆಂದು ತಿಳಿದು ಬಂತು.

"ನಾನು ಹಾಳ ಗೋರ್ಟಾ ಮತ್ತು ಹೊನ್ನಳ್ಳಿಯಲ್ಲಿ ಭಾವುರವ ಪಟೇಲರ ಜೋತೆಗೆ ಸ್ವಾತಂತ್ರದ ದಿನದಂದು ತಿರಂಗಾ ಧ್ವಜವನ್ನು ಹಾರಿಸದೆ ರಜಾಕಾರರ ಮುಖಂಡ ಇಸ್ಲಾಮುದ್ದಿನ ಪೋಲಿಸರ ಜೊತೆಗೆ ಬಂದು ದ್ವಜವನ್ನು ಕೆಳಗಿಳಿಸಿ ಭಾವುರಾವ ಪಟೇಲರ ಮೇಲೆ ಆಕ್ರಮಣ ಮಾಡಿದ ಆಮೇಲೆ ಬಸವಕಲ್ಯಾಣದ ಗೋರ್ಟಾ ಗ್ರಾಮಕ್ಕೆ ಇಸ್ಲಾಮೊದ್ದಿನ ಬರುವಾಗ ಭಾವುರವ ಪಟೇಲರು ಗುಂಡಿಟ್ಟು ಕೊಂದರು ಮುಂದೆ ಈ ಒಂದು ದುರ್ಘಟನೆ ಗೋರ್ಟಾ ಹತ್ಯಕಾಂಡಕ್ಕೆ ನಾಂದಿ ಯಾಯಿತು. ಗೋರ್ಟಾ ಗ್ರಾಮದ ಮೇಲೆ ರಜಾಕಾರರು ದಾಳಿ ಮಾಡಿದ ನಂತರ ಜನರ ಸಾಮುಹಿಕ ಹತ್ಯಾಕಾಂಡದ ಸಮಾಚಾರ ಕೇಳಿ ಆಚಾರ್ಯ ವೀನೋಭಾ ಭಾವೆ, ಸ್ವಾಮಿ ರಮಾನಂದ ತಿರ್ಥ ಮತ್ತು ಕೆ.ಎಂ.ಮುನಸಿ ಅವರು ಗ್ರಾಮಕ್ಕೆ

ಬಂದು ಜನರಿಗೆ ಸಾಂತ್ವನ ಹೇಳಿದರು. ಮುಂದೆ ಕೇಂದ್ರ ಸರ್ಕಾರಕ್ಕೆ ಗೋರ್ಟಾದ ಘಟನೆ ಬಗ್ಗೆ ವರದಿ ಖಳಿಸದರಂತೆ ಈ ಹಿರಿಯ ಮುಖಂಡರ ಸಾಂತ್ವನ ಮಾತು ಹೊರತಾಗಿ ನಮಗೆ ಏನು ಪರಿಹಾರ ದೊರೆಯಲಿಲ್ಲ. ಸೆಪ್ಟಂಬರ 17ರಂದು ಹೈದ್ರಾಬಾದ ಸಂಸ್ಥಾನ ನಿಜಾಂರ ಕಪಿಮುಷ್ಟಿಯಿಂದ ಬಿಡುಗಡೆ ಹೊಂದಿ ಭಾರತದ ಒಕ್ಕುಟಕ್ಕೆ ಸೇರಿತು.ಹೈದ್ರಾಬಾದ ರಾಜ್ಯದ ಮೊದಲ ಮುಖ್ಯಮಂತ್ರಿ ಯಾಗಿದ್ದ ಬಿ.ರಾಮಕೃಷ್ಣರಾವ ಗೋರ್ಟಾಕ್ಕೆ ಬಂದು ಪುನರ್ವಸತಿ ಆರ್ಥಿಕ ಸಹಾಯ ಮಾಡಬಹುದಾಗಿತ್ತು. ಆದರೆ ಸ್ವತಂತ್ರ್ಯದ ನಂತರ ಕಾಂಗ್ರೇಸ ಮುಖಂಡರಿಗೆ ಅಧಿಕಾರದ ದಾಹ ಹೆಚ್ಚಿತು. ಆದ್ದರಿಂದ ಅವರು ಜನರ ಕಷ್ಟ ಕಾರ್ಪಣ್ಯಗಳಿಗೆ ಸ್ಪಂಧಿಸಲಿಲ್ಲ ಈ ಪ್ರಕಾರ ನಿರಾಶೆ

ಹೊಂದಿದ ವಿಠೋಬಾ ನೀರೊಡೆ ತಮ್ಮ ಅಭಿಪ್ರಾಯವನ್ನು ಈ ರೀತಿ ವ್ಯಕ್ತ ಪಡಿಸಿದ ವಿಷಯವನ್ನು ಸ್ಪಷ್ಟಪಡಿಸುತ್ತಿದ್ದೆನೆ.

**3 ವೀರುಪಾಕ್ಷಯ್ಯ ಸ್ವಾಮಿ ಮೇಲಗಲ್ಲಿ (ಗೋರ್ಟಾ) ಬಿ ವಯಸ್ಸು (80)**

ಗೋರ್ಟಾ ಗ್ರಾಮದ ಪ್ರಮುಖರಲ್ಲಿ ವಿರುಪಾಕ್ಷಯ್ಯ ಸ್ವಾಮಿಯವರು ಕಣ್ಣಾರೆ ಕಂಡ ದೃಶ್ಯವನ್ನು ಬೇಟಿ ಮಾಡಿದಾಗ ಕೆಳಗಿನಂತೆ ಅಭಿಪ್ರಾಯ ನೀಡಿದರು

"ಗೋರ್ಟಾ ಗ್ರಾಮದ ಬಗ್ಗೆ ಹೇಳಬೆಕೆಂದರೆ ನನಗೆ ಅತಿವ ದು:ಖವೆನಿಸುತ್ತದೆ ಆ ಸಮಯದಲ್ಲಿ ರಜಾಕಾರರ ಹಾವಳಿಯಿಂದ ಕ್ರೂರ ಕೃತ್ಯಗಳು ಲೂಟಿ, ದಂಗೆಗಳು ಪೂರ್ಣ ಗೋರ್ಟಾ ಗ್ರಾಮದ ಜನ ಜೀವನವನ್ನು ವಿಚಿತ್ರಗೊಳಿಸಿದರು. ಈ ಹತ್ಯಕಾಂಡ ಮನುಕುಲದ ಇತಿಹಾಸದಲ್ಲಿ ಒಂದ ಕರಾಳ ಘಟನೆಯಾಗಿದೆ. ಈ ಘಟನೆಯಿಂದ ಗೋರ್ಟಾ ಗ್ರಾಮವು ಎಲ್ಲಾ ರೀತಿಯ ನೋವನ್ನು ರಜಾಕಾರರಿಂದ ಅನುಭವಿಸಬೇಕಾಗಿತ್ತು. ಇಷ್ಟಾದರು ಕೂಡಾ ಘನಸರ್ಕಾರ ಆಗಿರುವ ಹಾನಿಯ 70ಲಕ್ಷ ಹಣವನ್ನು ಕೊಡಬೇಕೆಂದು ಘೋಶಿಸಿದರು ಕೂಡಾ ಇನ್ನುವರೆಗು ಆ ಕೆಲಸ ಪೂರ್ಣಗೊಂಡಿಲ್ಲ. ಹೀಗಾಗಿ ಈ ಗ್ರಾಮವನ್ನು ಐತಿಹಾಸಿಕ ಹುತಾತ್ಮರ ನೆನಪಿಗೊಸ್ಕರ ಅಲ್ಲಿರುವ ಬೃಹತ ಡುಮಣೆ ಅವರ ಮನೆಯನ್ನು ಐತಿಹಾಸಿಕ ಸ್ಮಾರಕ ಭವನವನ್ನಾಗಿ ಮಾಡಬೇಕೆಂದು ತಮ್ಮ ಹೇಳಿಕೆಯಲ್ಲಿ ತಿಳಿಸಿದರು" ಈ ರಿತಿಯಗಿ ಗೋರ್ಟಾ ಘಟನೆಯಿಂದ ನಮ್ಮ ಜನತೆಗೆ ಅಪಾರ ಹಾನಿ ಉಂಟಾಗಿದೆಈ ಹಾನಿಯಿಂದ ಅನೇಕ ಜನರನ್ನು ಕಳೆದು ಕೊಂಡಿದ್ದು ಮತ್ತು ಅನೇಕ ಮನೆ ಮಠಗಳನ್ನು ಕಳೆದುಕೊಂಡಿದ್ದು ಈ ಘಟನೆಯಿಂದ ಗೋರ್ಟಾದ ಜನತೆಗೆ ಕೊನೆಯ ಉಸಿರಿರುವವರೆಗು ನೆನಪಿಸುಂತಹ ಒಂದು ದುರಾದೃಷ್ಟಕರ ಘಟನೆಯಾಗಿದೆ ಎಂದು ಹೇಳಬಹುದು.

ಹೇಳಿಕೆದಾರರ ಸಹಿ

(ವೀರುಪಾಕ್ಷಯ್ಯಾ ಸ್ವಾಮಿ)

**4 ಮಾರುತಿ ಪರೀಟ ವಯಸ್ಸು (77)**

ಗೋರ್ಟಾ ಗ್ರಾಮದ ಹತ್ಯಕಾಂಡ ಕುರಿತು ತಮ್ಮ ಹೇಳಿಕೆಯಲ್ಲಿ ಮಾರುತಿ ಪರಿಟ ಅವರು ಕಣ್ಣಾರೆ ಕಂಡಂತಹ ಘಟನೆ ತಮ್ಮ ಹೇಳಿಕೆಯಲ್ಲಿ ತಿಳಿಸಿದರು.

"ರಜಾಕಾರರ ಹಾವಳಿಯ ಸಮಯದಲ್ಲಿ ನಾನು ಹಲವಾರು ಅಹಿತಕರ ಘಟನೆಗಳನ್ನು ಕಣ್ಣಾರೆ ಕಂಡೇನು ಆ ಹೋರಾಟದಲ್ಲಿ ಭಾಗವಹಿಸಿದ ನಾನು ಮತ್ತು ನಮ್ಮ ಸಹೋದರರು ಕುಡಿಕೊಂಡು ಹೋರಾಡಿದೆವು. ನಮ್ಮ ಹತ್ತಿರ ಯವುದೆ ಶಸ್ತ್ರಾಸ್ತ್ರಗಳು ಇರಲಿಲ್ಲ ಕೇವಲ ಬಿಜಲೋಟ ಬಾರ ಇದ್ದವು ಆದರೆ ರಜಾಕಾರರಲ್ಲಿ ಹಲವಾರು ಬಂದೂಕುಗಳು ಮತ್ತು ಮದ್ದುಗುಂಡುಗಳು ಇದ್ದವು ಅವರು ತಮ್ಮ ರಜಾಕಾರರ ಬಳಗವನ್ನು ತೆಗೆದುಕೊಂಡ ಪೂರ್ಣ ಊರಿಗೆ ಘೇರಾವ ಹಾಕಿದರು ಆಗ ಊರಿನ ಜನರೆಲ್ಲ ಭಯಭಿತರಾಗಿ ಓಡತೊಡಗಿದರು. ಹೀಗೆ ರಜಾಕಾರರು ತಮ್ಮ ಅತ್ಯಾಚಾರದಲ್ಲಿ ಜನರನ್ನು ಹೊಡೆಯುತ್ತಾ ಲೂಟಿ ಮಾಡುತ್ತಾ ಗೋರ್ಟಾ ಗ್ರಾಮವನ್ನು ಪೂರ್ಣ ಕೊಳ್ಳೆಹೊಡೆದು ಅಲ್ಲಿನ ಮನೆ ಮಠಗಳನ್ನು ಲೂಟಿ ಮಾಡಿ ಸಂಪೂರ್ಣ ಊರಿನ ದೃಷ್ಯವನ್ನ ಒಂದೆ ದಿನದಲ್ಲಿ ನಾಶವಾಗಿದ್ದನ್ನು ನಾನು ಕಣ್ಣಾರೆ ಕಂಡ ದೃಷ್ಯವನ್ನು ಹೇಳುತ್ತಿದ್ದೆನೆ.

ಹೇಳಿಕೆದಾರರ ಸಹಿ

ಮಾರುತಿ ಪರೀಟ್

5 **ಮುಕ್ತಾಬಾಯಿ ಮಾಲಿ ಪಾಟೀಲ ವಯಸ್ಸು (78)**

ಗೋರ್ಟಾ ಗ್ರಾಮದ ಹತ್ಯಾಕಾಂಡವನ್ನು ಕುರಿತು ತಮ್ಮ ಹೇಳಿಕೆಯಲ್ಲಿ ವರದಿಯನ್ನು ವಯಸ್ಸಾದ ಈಕೆ ಕ್ರಾಂತಿಕಾರಿ ಹೇಳಿಕೆಯನ್ನು ಕೊಟ್ಟಳು

"ಈ ವೃದ್ದ ಮಹಿಳೆ ಗೋರ್ಟಾ ಗ್ರಾಮವನನು ಕುರಿತು ಆಕೆ ಹೇಳುವ ಮಾತಿನಲ್ಲಿ ರಜಾಕಾರರ ದಾಳಿಯ ಸಮಯದಲ್ಲಿ ನಾನು ಗರ್ಭಿಣಿ ಯಾಗಿದ್ದು ನಾನು ತವರು ಮನೆಗೆ ಹೋಗಿದ್ದೆ ಆದರೆ ಆ ಎಲ್ಲಾ ಘಟನೆಯನ್ನು ಕೇಳಿ ಕಣ್ಣೆದುರಿಗೆ ಕಂಡದಾಯಿತು. ಮತ್ತು ನನ್ನ ಪತಿಯವರಾದ ಬಸಪ್ಪ ಮಾಲಿಗೌಡರನ್ನು ರಜಾಕಾರರು ಮನೆಯಿಂದ ಎಳೆದುಕೊಂಡು ಲಕ್ಷ್ಮಿ ದೇವಾಸ್ಥಾನದ ಹತ್ತಿರ ತಂದು ಜಿವಂತವಾಗಿ ಕಡೆದ ದೃಷ್ಯವನ್ನು ಕೇಳಿ ನನಗೆ ಅತಿವ ದು:ಖ ಉಂಟಾಯಿತು. ಮುಂದೆ ತವರು ಮನೆಯಲ್ಲಿದ್ದ ನನಗೆ ಎಲ್ಲಾ ವಿಷಯ ಗೊತ್ತಾಗಿ ಊರಲ್ಲಿ ನಡೆದಿರುವಂತಹ ಈ ಘಟನೆ ನನಗೆ ಅತಿವ ದುಖ:ತಂದಿದೆ ನಾನು ತವರು ಮನೆಯಿಂದ ಆರು ತಿಂಗಳ ನಂತರ ಊರಿಗೆ ಬಂದಾಗ ಊರು ಸ್ಮಶಾನ ಮೌನವಾಗಿತ್ತು. ಈ ಘಟನೆ ಕಂಡು ಮನೆಯಲ್ಲಿ ಎಲ್ಲರನ್ನು ಕೇಳಿದಾಗ ನನಗೆ ಈ ಘಟನೆಯ ಬಗ್ಗೆ ವಿವರಣೆಯನ್ನು ಕೊಟ್ಟರು ಹೀಗಾಗಿ ಇಂತಹ ಘಟನೆ ಮರುಕಳಿಸದಂತೆ ನೋಡಿ ಕೊಳ್ಳುವದು ಮುಂದಿನ ಪಿಳಿಗೆಯ ಒಂದು ಆದ್ಯ ಕರ್ತವ್ಯವಾಗಿದೆ. ಎಂದು ತಮ್ಮ ಕೊನೆಯ ಮಾತಿನಲ್ಲಿ ಹೇಳಿದರು"

ಹೇಳಿಕೆದಾರರ ಸಹಿ

**ಮುಕ್ತಾಬಾಯಿ ಮಾಲಿ ಪಾಟೀಲ**

**6.ಮಹಾರುದ್ರಪ್ಪಾ ಡೊಣಗಾಪೂರೆ ವಯಸ್ಸು (75)**

ಗೋರ್ಟಾ ಹತ್ಯಕಾಂಡವನ್ನು ಕುರಿತು ಮಹಾರುದ್ರಪ್ಪಾ ಡೊಣಗಾಪೂರೆ ವಯೋವೃದ್ದರ ನೀಡಿರುವ ಹೇಳಿಕೆ ಈ ಕೆಳಗಿನಂತೆ ಕಾಣಬಹುದು.

"ಇಸ್ಲಾಮೊದ್ದಿನ ಎನ್ನುವಂತಹ ವ್ಯಕ್ತಿ ಗೋರ್ಟಾ ಬಿ ಗ್ರಾಮದ ರಜಾಕಾರರ ರಾಜಕೀಯ ಮುಖ್ಯಸ್ಥನಾಗಿದ್ದು ಈತ ನಿಜಾಂ ಸರ್ಕಾರದ ಪರವಾಗಿ ಕಾರ್ಯ ನಿರ್ವಹಿಸುತ್ತಿದ್ದ ಈತ ಹೊನ್ನಳ್ಳಿ ಗ್ರಾಮದಲ್ಲಿ ಹಾರಿಸಿರುವ ಕಾಂಗ್ರೇಸ್ ದ್ವಜವನ್ನು ಕೆಳಗಿಳಿಸಿದ ಈತನ ವಿರುದ್ದ ಮುಂದೆ ಭಾವುರಾವ ಪಟೇಲರು ಹೋರಾಟ ಮಾಡಿ ಆತನನ್ನು ಕೊಲೆ ಮಾಡಿದರು. ಆಗ ಮೀರ ಮಜಲೀಸ್ ಎನ್ನುವಂತಹ ರಜಾಕಾರರ ಸೈನ್ಯದ ತುಕಡಿ ಗೊರ್ಟಾ ಗ್ರಾಮಕ್ಕೆ ಬಂದು ಇಲ್ಲಿರುವ ಇಸ್ಲಾಂರು ಸೇರಿಕೊಂಡು ಗೋರ್ಟಾ ಗ್ರಾಮವನ್ನು ಕಾಳ್ಗಿಚ್ಚಿನಂತೆ ಧಂಸ ಮಾಡಿದರು ಈ ಘಟನೆಯಿಂದ ಗೋರ್ಟಾ ಗ್ರಾಮದಲ್ಲಿ ಹಲವಾರು ರೀತಿಯಲ್ಲಿ ಹಾನಿ ಉಂಟಾಗಿ ಈ ಗ್ರಾಮವನ್ನು ಈ ಘನ ಸರ್ಕಾರ ಯಾವುದೆ ಕಾಳಜಿಯನ್ನು ವಹಿಸದೆ ಕೆಲಸ ಮಾಡುತ್ತಿಲ್ಲ ಇಲ್ಲಿ 200ಕ್ಕಿಂತ ಹೆಚ್ಚು ಜನ ತಮ್ಮ ಪ್ರಾಣವನ್ನು ಕೊಟ್ಟು ಹೋರಾಡಿದ್ದಾರೆ. ಈ ಘಟನೆಯ ಒಂದು ವಾರದ ನಂತರ ನಾನು ಊರಿಗೆ ಬಂದ ನಂತರ ಅಲ್ಲಿನ ದೃಶ್ಯವನ್ನು ನೋಡಿ ಎಲ್ಲಂದರಿಲ್ಲಿ ಬಿದ್ದಿರುವ ಮನುಷ್ಯರ ಹೆಣಗಳು ಸತ್ತ ದನಗಳು ಬಿದ್ದಿರುವುದನ್ನುಕಂಡು ನನ್ನ ಕರುಳು ಕಿವುಚಿದಂತಾಯಿತು. ಊರಲ್ಲಿ ಹದ್ದು ಕಾಗೆಗಳು ಹಾರಾಡುತ್ತಿದ್ದವು. ಈ ಎಲ್ಲಾ ಕಥೆಗಳನ್ನು ಹೇಳಲು ನಾನು ಇನ್ನೂ ಬದುಕಿದ್ದೇನೆ.

ಹೇಳಿಕೆದಾರರ ಸಹಿ

**ಮಹಾರುದ್ರಪ್ಪಾ ಡೊಣಗಾಪೂರೆ**

**7 ಝುರನಾಥಪ್ಪಾ ರಾಜೇಶ್ವರೆ (60) ವಯಸ್ಸು**

ಗೋರ್ಟಾ ಹತ್ಯಾಕಾಂಡದ ಕುರಿತು ಸಂಶೋಧನೆಗೆ ಗ್ರಾಮಕ್ಕೆ ಹೋದಾಗ ಅಲ್ಲಿನ ಪ್ರಮುಖರಾದ ಝುರನಾಥಪ್ಪಾ ರಾಜೇಶ್ವರೆ ಅವರು ಹತ್ಯಾಕಾಂಡದ ಕುರಿತು ಈ ಕೆಳಗಿನಂತೆ ವರದಿ ನಿಡಿದ್ದಾರೆ

"ಗೋರ್ಟಾ ಗ್ರಾಮವು ರಜಾಕಾರರ ಹಾವಳಿಯಿಂದ ಸಂಪೂರ್ಣ ನಾಶವಾಗಿದೆ ಇಸ್ಸಾಮೊದ್ದಿನ ಎನ್ನು ರಜಾಕಾರರ ನಾಯಕ ಸಂಪೂರ್ಣವಾಗಿ ಗ್ರಾಮವನ್ನು ರಜಾಕಾರರ ಸ್ನೇಹ ಬೆಳೆಸಿ ಹಲವಾರು ರಜಾಕಾರರ ಸೈನಿಕ ಪಡೆಯನ್ನು ತೆಗೆದುಕೊಂಡು ಗೋರ್ಟಾ ಗ್ರಾಮದ ಮೇಲೆ ದಾಳಿ ಮಾಡಿ ಸಂಪೂರ್ಣವಾಗಿ ನಾಶಮಾಡಿದರು. ಇದರಲ್ಲಿ ಹಲವಾರು ಜನ ಹೋರಾಟದಲ್ಲಿ ತಮ್ಮ ಪ್ರಾಣವನ್ನು ಕೊಟ್ಟಿದ್ದಾರೆ ಅದೆ ರಿತಿ ತಮ್ಮ ಮನೆ ಮಠಗಳನ್ನು ಕಳೆದುಕೊಂಡಿದ್ದಾರೆ ಹೀಗಾಗಿ ಈ ಹತ್ಯಾಕಾಂಡ ಗೋರ್ಟಾ ಗ್ರಾಮದ ಸರ್ವನಾಶಕ್ಕೆ ಕಾರಣವಾಗಿದೆ. ಎಂದು ಸಂಕ್ಷಿಪ್ತವಾಗಿ ವರದಿ ನೀಡಿದರು

ಹೇಳಿಕೆದಾರರ ಸಹಿ

**ಝುರನಾಥಪ್ಪಾ ರಾಜೇಶ್ವರೆ**

**8 ನಾಗಶೆಟ್ಟಪ್ಪಾ ವಯಸ್ಸು (80)**

ಗೋರ್ಟಾ ಗ್ರಾಮದ ಸಮೀಕ್ಷೆಗೆ ಹೋದಾಗ ಅಲ್ಲಿನ ಹಿರಿಯ ವ್ಯಕ್ತಿಯಾದ ನಾಗಶೆಟ್ಟಪ್ಪಾ ಅವರನ್ನು ಭೇಟಿಯಾಗಿ ಈ ಹತ್ಯಾಕಾಂಡದ ಕುರಿತು ದುಖಃಕರವಾದ ಹೇಳಿಕೆಯನ್ನು ಕೊಟ್ಟರು

"ಗೋರ್ಟಾದ ಮೇಲೆ ರಜಾಕಾರರು ದಾಳಿ ಮಾಡಲು ಇಸ್ಸಾಮೊದ್ದಿನನ ಕೊಲೆ ಮಾಡಿದ್ದೆ ಇದಕ್ಕೆ ಪ್ರಮುಖ ಕಾರಣವಾಯಿತು. ಇದರಿಂದ ಎಲ್ಲಾ ಮುಸಲ್ಮಾನರು ಕೂಡಿಕೊಂಡು ರಜಾಕಾರರ ಜೋತೆ ಕೈ ಮಿಲಾಯಿಸಿ ಸಂಪೂರ್ಣವಾಗಿ ಗೋರ್ಟಾ ಗ್ರಾಮವನ್ನು ದುರಂತಮಯವಾಗಿ ನಾಶಗೊಳಿಸಿದರು.ಎಂದು ತಮ್ಮ ಹೇಳಿಕೆಯಲ್ಲಿ ಹೇಳಿದರು.

ಹೇಳಿಕೆದಾರರ ಸಹಿ
नागशेट्टप्पा

ನಾಗಶೆಟ್ಟಪ್ಪಾ ಬಿರಾದಾರ

**ಜನಪದ ಸಾಹಿತ್ಯ**

ಕನ್ನಡಾಂಬೆಯ ನಾಡು ಅತಿ ಸುಂದರವಾದ ಬಿಡು ಅದರ ಉತ್ತರ ತುದಿಯು ನಮ್ಮ ಕಲ್ಯಾಣ ನಾಡು ಅದರ ಕೆಂಪು ಮಣ್ಣಿನ ಸೊಗಡಿನಲ್ಲಿ ಬೇವಿನ ತಂಪು ಮತ್ತು ಮಾವಿನ ತಂಪು. ನೀರಳೆ ಗಿಡಗಳ ದಟ್ಟ ನೆರಳುಗಳ ರಾಷ್ಟ್ರೀಯ ಹೆದ್ದಾರಿಗಳ ಬದಿಯಲ್ಲಿ ನಿಂತು ಪ್ರವಾಸಿಗರಿಗೆ ಮತು ನಾಡ ಜನರ ಮನವನ್ನು ಅರಳಿಸುತ್ತವೆ.

ಕಲ್ಯಾಣನಾಡು ಭಾಷೆಯಲ್ಲಿ ಬಹುವೈವಿದ್ಯತೆಯನ್ನು ಹೊಂದಿದ ನಾಡು ಇಲ್ಲಿಯ ಜನರು ಜನಪದ ಸಾಹಿತ್ಯಕ್ಕೆ ತನ್ನದೆ ಆದ ಕಥನ ಗೀತೆಗಳ ಮುಲಕ ಒಂದು ಪ್ರದೇಶದ ಸಂಸ್ಕೃತಿಯು ಆ ನಾಡಿನ ಮೇಲೆ ಯಾವ ರಿತಿ ಪ್ರಭಾವ ಬೀರುತ್ತದೆ ಎಂದು ತಿಳಿಸಿ ಕೊಟ್ಟವರು ಅವರು ನಾಗ ಪಂಚಮಿ ಗೌರಿ, ಹಬ್ಬಗಳನ್ನ ಮತು ಮದುವೆ ಸಮಾರಂಭಗಳಲ್ಲಿ ಬೀಸುವಾಗ ಕುಟ್ಟುವಾಗ ಶಿಮಂತ ಕಾರ್ಯಕ್ರಮ ತೊಟ್ಟಿಲು ಕಾರ್ಯಕ್ರಮಗಳಲ್ಲಿ ಜನಪದ ಸಂಪತ್ತು ತನ್ನದೆ ವಿಶಿಷ್ಟ ಶೈಲಿಯಲ್ಲಿ ವಿಜೃಂಬಿಸಿದಂತೆ ಮಾಡಿದರು. ಕಲ್ಯಾಣ ನಾಡಿನಲ್ಲಿ ಪ್ರಚಲಿತ ದಲ್ಲಿರುವ ಕಥನ ಗೀತೆಗಳು ಈ ಕೆಳಗಿನಂತಿವೆ.

1) ನಾಗರ ಪಂಚಮಿ ಹಾಡು
2) ಕೋಮಾಲಿ ಪದ
3) ಚಂದ್ರುಣಿ ಹಾಡು
4) ಚಂದ್ರಾವತಿ ಹಾಡು
5) ಕಾಶಿಬಾಯಿ ಹಾಡು
6) ಗೋರ್ಟಾ ಹತ್ಯಕಾಂಡದ ಬುಲಾಯಿ ಪದ

ಈ ರಿತಿಯಾಗಿ ಕಥನ ಗೀತೆಗಳ ಮುಲಕ ಆಗಿರುವಂತಹ ಸಾಮಾಜಿಕ ಪೌರಾಣಿಕ ಮತ್ತು ಐತಿಹಾಸಿಕ ಘಟನೆಗಳಿಂದ ಒಳಗೊಂಡಿದರಿಂದ ಇವು ಒದುಗರಹ ಮನವನ್ನು ಮಿಡಿಯುತ್ತವೆ.

**ಗೋರ್ಟಾದಲ್ಲಿ ಜನಪದ**

ಗೋರ್ಟಾದಲ್ಲಿ ಪೂರ್ವದ ಅನುವಂಶಿಕ ಎಂಬಂತೆ ಎರಡು ಗಲ್ಲಿಗಳಾದ ಮೇಲಗಲ್ಲಿ ಮತ್ತು ಕೆಳ ಗಲ್ಲಿಯಲ್ಲಿ ಸಂಗಿತದ ಮುಲಕ ನಾಟಕಗಳನ್ನು ಮಾಡುತಿದ್ದರು. ಆ ನಾಟಕಗಳ ಹೆಸರುಗಳು ಈ ರೀತಿಯಾಗಿ ಕಾಣಬಹುದು.

1) ರಾಜ ಹರಿಶ್ಚಂದ್ರ

ಮೇಲಗಲ್ಲಿಯಲ್ಲಿ ಚಳಕಾಪೂರದ ಗುರುಪಾದಯ್ಯನವರು ಮತ್ತು ಶಿವಲಿಂಗಯ್ಯ ಮಠಪತಿಯವರು ಹರಿಶ್ಚಂದ್ರ ನಾಟಕವನ್ನು ಆಡಿದರು ಅದರಲ್ಲಿ ಹರಿಶ್ಚಂದ್ರನ ಪಾತ್ರವನ್ನು ಶಿವಲಿಂಗಯ್ಯನವರು ವಹಿಸಿಕೊಂಡು ತಾರಮತಿಯ ಪಾತ್ರವನ್ನು ಶಿವರಾಯ ಹುಣಜೆ,ವಹಿಸಿಕೊಂಡು ಮತ್ತು ಲೋಹಿತ್ಸಾಯ ವನ್ನು ಪಾತ್ರವನ್ನು ಕಂಟೆಪ್ಪ ಚುಕರ್ತೆ ಪಾತ್ರವನ್ನು ವಹಿಸಿದರು.

2) ಲಿಖಿತ ಲೀಲಾ

ಈ ನಾಟಕವನ್ನು ಮಾಡಬೇಕೆಂದು ವಿಚಾರಿಸಿ ಅದಕ್ಕೆ ಗುರುಪಾದಯ್ಯನವರು ಹಾರ್ಮೊನಿಯಮ ಭಾರಿಸಲು ಕರೆಸಿ ಈ ನಾಟಕವನವನ್ನು ಶಿವಲಿಂಗಯ್ಯನವರು ಮಾಡಿಸಿದರು.

3) ಸಜಿವ ಸತ್ವ ಪರೀಕ್ಷೆ

ಈ ನಾಟಕ ಡೊಪ್ಪಿನಾಟದ ಚಾಲಿನಲ್ಲಿ ಶಿವಲಿಂಗಯ್ಯನವರು ಸ್ವತಹ ಕೂಡಿಸಿ ಕವಿತೆ ರಚಿಸಿ ಬರೆದು ಕೊಟ್ಟುರು. ಇನ್ನೊಂದು ಮಾಳಿಂಗರಾಯ ಎಂಬ ಡಪ್ಪಿನಾಟಕ್ಕೆ ಕವಿತೆ ಬರೆದುಕೊಟ್ಟರು ಇದರಿಂದ ಶಿವಲಿಂಗಯ್ಯನವರ ಕಿರ್ತಿ ಪತಾಕೆ ಉನ್ನತ ಮಟ್ಟಕ್ಕೆ ಏರಿತು.

**ಈ ಗೋರ್ಟಾದ ಎಂಡು ಗಲ್ಲಗಳಲ್ಲಿ ಆಡಿದ ನಾಟಕ ಹಾಗು ಪಾತ್ರಧಾರಿಗಳ ವಿವರ ಈ ಕೆಳಗಿನಂತಿವೆ**

ಮೇಲಗಲ್ಲಿ

ಸ್ವತಹ ಶಿವಲಿಂಗಯ್ಯನವರು ತಾವು ಹಾರ್ಮೊನಿಯಮ ಭಾರಿಸುವದುಕ್ಕಿಂತಲು ಶ್ರೇಷ್ಟ ಸಂಗೀತ ತಜ್ಞರಾದ ಪಜ್ಜೆಬುವ ಅವರ ಶಿಷ್ಯರಾದ ಶ್ರೀ ನುರಂದಯ್ಯ ಸ್ವಾಮಿಗಳನ್ನು ಕರೆತಂದು ಬಿಎ ಎಂಬ ನಾಟಕ ಆಡಿಸಿದರು.ಈ ನಾಟಕದ ನಿರ್ದೆಶಕರು ಶಿವಲಿಂಗಯ್ಯ ಮಠಪತಿ ಅವರು

ಪಾತ್ರದಾರಿಗಳು

1) ಕಂಟೆಪ್ಪ ಚಕುರ್ತೆ, 2) ಅಪ್ಪಾರಾಯ ಪೋಲಿಸ್ ಪಾಟಿಲ್, 3) ವಿರಪ್ಪ ಎರನಾಳೆ 4) ರಾಚಪ್ಪಾ ಕಣಜೆ 5) ಲಿಂಗಶೆಟ್ಟಪಾ ಪಾಟಿಲ್ ಹೊನ್ನಾಳಿ 6) ಮಾದಪ್ಪ ಗುರಪ್ಪಾ ಜಂಗಶಟ್ಟಿ 6) ಶಂಕರೆಪ್ಪ ಸಜ್ಜನಶೆಟ್ಟಿ 7) ಗುರಪ್ಪ ಬೊಂದೆ 8) ಇಸಾಮೊದ್ದಿನ 9) ರಾಮಶೆಟ್ಟಿ ಪಟ್ನೆ

ಕೆಳಗಲ್ಲಿ

ಸ್ತ್ರೀ ಚರಿತ್ರೆ ಅರ್ಜುನ ವಿಜಯ ಎಂಬ ಎರಡು ನಾಟಕ ವಾಡಿದರು

## ಪಾತ್ರಧಾರಿಗಳು

1) ನಾಗಯ್ಯ ಸಂಗಯ್ಯ ಪಟವಾದಿ 2) ಗುರುಪ್ಪ ಹೂಗಾರ 3) ವೀರಭದ್ರಪ್ಪಾ ರಾಜೇಶ್ವರೆ 4) ರಾಚಯ್ಯ ಶರಣಯ್ಯ ಮಠಪತಿ 5) ಮಹಾರುದ್ರಪ್ಪಾ ರಾಜೇಶ್ವರೆ 6) ಧೂಳಪ್ಪಾ ಬಡಿಗೇರ 7) ಕಾಶಪ್ಪಾ ಕನಕಟ್ಟೆ 8) ಶಂಕರೆಪ್ಪಾ ಪತಂಗೆ 9) ಹಾವಗೆಪ್ಪಾ ರಾಜೋಳೆ

ಹೀಗೆ ಗೋರ್ಟಾ ಗ್ರಾಮದಲ್ಲಿ ಎರಡು ಗಲ್ಲಿಗಳಲ್ಲಿ ನಾಟಕಗಳನ್ನು ಆಡಿ ಅಲ್ಲಿನ ಜನರಿಗೆ ಸಂಗೀತ ಡೊಪ್ಪಿನ ಆಟ ಪಾತ್ರದ ಬಗ್ಗೆ ತಿಳಿಸುತ್ತಿದ್ದರು .

## ಜನಪದ ಹಾಡು

ಗೋರ್ಟಾ ಗ್ರಾಮದಲ್ಲಿ ಆಗಿರುವಂತಹ ದುರಂತಹ ಘಟನೆಯನ್ನು ಕುರಿತು ಅಲ್ಲಿನ ಜನಪದ ಆಸಕ್ತರು ಕಟ್ಟಿರುವ ಹಾಡು ಇಂತಿದೆ.

ಸತ್ತಾವಾನ ಸಾಲದಾಗ ಸತ್ಯಾನಾಶ ಆಗಿ ಹೋಯಿತು

ಚಿತ್ತಕೊಟ್ಟಿ ಕೇಳಿರಿ ಕಥ

ಸತ್ಯ ಶಿವ ಭಕ್ತ ಮಂದಿಗಿ ಅತ್ಯಚಾರ ಮಾಡಿ

ರಜಾಕ ಮಂದಿ ಹಾಳಾಯ್ತಿ

ಬೋರಾಳ ರಾಜೋಳ ರಾಸೂರ ಹುಲಗತ್ತಿ

ಗೊಗ್ಗಕ ಬಂದು ನಿಂತಾರೋ?

ಗೋಕುಳ ಕಿಟ್ಟಾದವರು ಖಾನಾಪೂರ ನಿಂಬಾಪೂರ ]

ರಾಯಪಳ್ಳಿ ಮೇಲೆ ರಾಯಿ ಮಾಡಿ ಹಾಜಿ ॥

ಬಾಜೋಳಗಿ ಚಿಕಲಿ ಚ್ಯಾಂದಿ ದಾಡಗಿ ಯವರು

ದಾಡಿ ಮ್ಯಾಲ ಕೈಹಾಕಿ ಹಾಜಿ॥

ಮದಕಟ್ಟಿ ಮಂದಿ ಎಲ್ಲಾ ಮಧ್ಯಾಹ್ನಯ್ತು ಅಂದಕೇಶಿ

ಅಡಿಮ್ಯಾಲಿಂದ ಓಡುತ್ತಪ್ಪೊ ಓಡಿ–ಓಡಿ

ಊಚಾಕ ಬಂದರಪ್ಪ ದೌಡು ಮಾಡಿ–

ನೆಂಟ್ಪರೇಲ್ಲರಿಗೆ ಹೇಳುತ್ತಾರೆ ಕೂಂಚಿ ತೊಂಡು

ಓಡಿ ಬರಿ ಜಲ್ದಿ ಮಾಡಿ ?

ಗರಿಭ ಗಿರಿಮಲ್ಲ ಪದ ಮಾಡಿದನು

ಕಲಮ ಇಲ್ಲದೇ ಕಟ್ಟಿ ಹಾಜಿ॥[7]

**ಬುಲಾಯಿ ಹಾಡುಗಳು:-**

ಬುಲಾಯಿ ಹಾಡುಗಳು ನಮ್ಮ ಬೀದರ ಜಿಲ್ಲೆಯಲ್ಲಿ ಪವಿತ್ರ ಸ್ಥಾನವನ್ನು ಪಡೆದಿವೆ. ಈ ಬುಲಾಯಿ ಹಾಡುಗಳು ಹಲವಾರು ಮಹಿಳೆಯರು ಹಾಡುತ್ತಿದ್ದರು ಮತ್ತು ಈ ಹಾಡನ್ನು ನಾಗರ ಪಂಚಮಿಯ ಹಬ್ಬದ ದಿವಸ ಎಲ್ಲಾರು ಕೂಡಿಕೊಂಡು ಹಾಡುತ್ತಿದ್ದರು. ಮತ್ತು ಎಲ್ಲಾ ಹೆಣ್ಣುಮಕ್ಕಳು ಗುಂಪಾಗಿ ಕೈ-ಕೈ ಹಿಡಿದು ಕೊಂಡು ಮುಂದೆ ಮುಂದೆ ಸರಿಯುತ್ತಾ ಈ ಹಾಡನ್ನು ರಾಗಬದ್ದವಾಗಿ ಹಾಡುತ್ತಿದ್ದರು. ಈ ಪದಗಳು ಬೀದರ ಜಿಲ್ಲೆಯ ಸುತ್ತಮುತ್ತಲಿನ ಹಳ್ಳಿಗಳಿಗೆ ಮಾತ್ರ ಸಿಮಿತ ಪ್ರತಿ ದಿನ ರಾತ್ರಿ ಹೆಣ್ಣುಮಕ್ಕಳು ಊಟ ಮಾಡಿ ಬುಲಾಯಿ ಹಾಡುಗಳನ್ನು ಹಾಡಲು ಸಿದ್ದರಾಗುತ್ತಿದ್ದರು. ಈ ಹಾಡನ್ನು ಹಾಡಲು ಪ್ರಮುಖವಾಗಿ ಇಬ್ಬರು ಮಹಿಳೆಯರು ಮುಂದೆ ಹಾಡುತ್ತಿದ್ದರು. ಅದೇ ರೀತಿ ಇನ್ನುಳಿದ ಮಹಿಳೆಯರು ಕೂಡಾ ಹಾಡುತ್ತಿದ್ದರು. ಈ ಸಮಯದಲ್ಲಿಯು ಆದರೆ ಬುಲಾಯಿ ಹಾಡುಗಳನ್ನು ಹಾಕಬೇಕೆನ್ನುವ ಸಮಯದಲ್ಲಿ ಅದು ತನ್ನದೆ ಆದ ಸಂಪ್ರದಾಯವನ್ನು ಹೊಂದಿದೆ.

**ಸಂಪ್ರದಾಯ:-**

ಕರ್ನಾಟಕದ ಕಾಶ್ಮೀರ ಎನಿಸಿರುವಂತಹ ಬೀದರ ಜಿಲ್ಲೆ ಜನಪದ ಸಾಹಿತ್ಯದ ಮೆದಳು ಹಾಗು ತವರೂರು ಇದಾಗಿದೆ. ಈ ಬೀದರ ಜಿಲ್ಲೆ ಜನಪದ ಸಾಹಿತ್ಯದ ನೆಲೆಯು ಮತ್ತು ಸಲೆಯು ಕೂಡಾ ಇದಾಗಿದೆ ಎಂದು ಹೇಳಬಹುದು.

**ವೈಶಿಷ್ಟ:-**

ಬುಲಾಯಿ ಹಾಡುಗಳು ವೈಶಿಷ್ಟವೇನೆಂದರೆ ಈ ಹಾಡುಗಳು ನಾರಿಯರ ಹಬ್ಬವಾದ ನಾಗರಪಂಚಮಿಯಂದು ಹಾಡುವ ಹಾಡುಗಳೆ ಬುಲಾಯಿ ಹಾಡುಗಳು.

1) ಬುಲಾಯಿ ಎನ್ನುವಂತಹ ಪದ ಉಧ್ಭವಿಸಬಹುಬಾದ ಶಬ್ದದಿಂದ ಬಂದಿರಬೇಕೆಂದು ತೋರುತ್ತದೆ. "ಬೆಹಲಾವ" ಎಂದರೆ ಮನರಂಜನೆ" ಎಂದರ್ಥ ಅಥವಾ ಮನಸ್ಸನ್ನು

ಖೂಷಿಗೊಳಿಸುವುದು ಎಂದರ್ಥ[੨]. ಮನರಂಜನೆಯಾ ಪ್ರತಿಕವಾದಂತಹ ಈ ಹಾಡುಗಳನ್ನು ರಜಾಕರರ ಹಾವಳಿ, ಪೌರಾಣಿಕ ಕಥೆಗಳು ಹಾಗು ಐತಿಹಸಿಕ ಕೊಡಗೆಗಳನ್ನು ಮತ್ತು ಮೊದಲಾದ ಘಟನೆಗಳನ್ನು ಒಳಗೊಂಡಿವೆ.

2) ಈ ರಜಾಕರರ ಎಂದರೆ "ಸ್ವಯಂ ಸೇವಕ ಎಂದರ್ಥ 1948ರಲ್ಲಿ ರಜಾಕರರು ಹಿಂದೂಗಳ ಮೇಲೆ ಮಾಡಿದ ಧಾಂದಲೆ ಕುರಿತು, ಹಾಡಿದ ಹಾಡುಗಳೆ ರಜಾಕರರ ಹಾವಳಿಯ ಹಾಡುಗಳು ಎಂದು ಹೇಳಬಹುದು. ನಾಗರಾಧನೆಯ ನಾಗಪಂಚಮಿಯ ಹಬ್ಬ ಶ್ರಾವಣ ಮಾಸದಲ್ಲಿ ಹಚ್ಚ ಹಸರಿನ ಬೆಳುದು ನಿಂತ ಬೆಳೆಗಳು ಹಾವುಗಳ ಕಾಟ ಹೆಚ್ಚು ಹೀಗಾಗಿ ನಾಗಪಂಚಮಿಯು ಯಾವ ರೀತಿ ಬೆಳೆದು ಬಂತು ಎನ್ನುವದು ಈ ರೂಪದಲ್ಲಿ ಇರಬಹುದು.

***ಜನಪದ ಕಥೆ:–**

ನಾಗರ ಪಂಚಮಿಯ ಹಬ್ಬದ ವೈಶಿಷ್ಠವನ್ನು ಈ ಕಥೆಯ ಮೂಲಕ ತಿಳಿದುಕೊಳ್ಳಬಹುದು. ಏನೆಂದರೆ ಬಡಪಾಯಿಯಾದ ಅಣ್ಣನು ತಂಗಿಯನ್ನು ತವರಿಗೆ ಕರೆದುಕೊಂಡು ಹೋಗಲು ಬಂದನು ತಂಗಿಯು ಶ್ರೀಮಂತ ಮನೆತನದ ಸೊಸೆ ಆಗ ಆತ ತಂಗಿಯನ್ನು ಕರೆಧುಕೊಂಡು ಹೋಗುತ್ತಿದ್ದ. ಹೋಗುವಾಗ ಇತನಿಗೆ ಆಕೆಯ ಒಡವೆಯ ಮೇಲೆ ಕಣ್ಣು ಬಿದ್ದು ಅವುಗಳನೆಲ್ಲಾ ಕೊಡು ಎಂದನು. ಆಕೆ ಸಂತೋಷದಿಂದ ಕೊಡಲು ಒಪ್ಪಿದಳು ಅದಕ್ಕು ತಾಳದೆ ಆಕೆಯನ್ನು ಕೊಂದು ಬಿಡಲು ಕಲ್ಲು ಬಂಡೆಯನ್ನು ಎತ್ತಿದ್ದನು. ಆಗ ಅದರ ಕೆಳಗಿದ್ದ ಹಾವು ಆತನನ್ನು ಕಚ್ಚಿ ಕೊಂದು ಹಾಕಿತು. ಆದರೆ ಕಣ್ಣಾರೆ ಕಂಡು ತಂಗಿ ನಾಗದೇವನ ಪ್ರಾರ್ಥಿಸಿ ಅಣ್ಣನನ್ನು ಬದುಕಿಸಿದಳು. ಮುಂದೆ ಹೆಣ್ಣನ್ನು ತವರಿಗೆ ತರುವ ಪದ್ದತಿಯು ರೂಢಿಯಲ್ಲಿ ಬಂದಿತ್ತು.

3) ಹೆಣ್ಣು ತನ್ನ ಗಂಡನ ಮನೆಯಲ್ಲಿ ಅನುಭವಿಸಿದ್ದ ಕಷ್ಟಗಳ ಭಾರವನ್ನು ತವರು ಮನೆಯಲ್ಲಿ ಹಾಡಿ–ಪಾಡಿ ಕುಣಿದು ಕುಪ್ಪಳಿಸಿ ಉಯ್ಯಾಲೆಯನ್ನು ಹಾಡಿ ಮನಸ್ಸು ಹಗುರ ಮಾಡಿ ಕೊಳ್ಳುವ ಹಾಡು ಈ ಭಾವವನ್ನು ಪ್ರತಿನಿಧಿಸುತ್ತದೆ ಎಂದು ಹೇಳಬಹುದು.

ಬುಲಾಯಿ ಪದಗಳು ಇತಿಹಾಸ ಹಾಗು ಪುರಾಣಗಳಲ್ಲಿ ಕಾಣಿಸಿಕೊಳ್ಳುವ ಮಹಾಪುರುಷರ ಕಥೆಗಳನ್ನು ಕುರಿತು ಕಾಣಬಹುದು.

ನಾಗರ ಪಂಚಮಿ ನಾಡಹೆಣ್ಣಿಗೆ ಹಬ್ಬ

ಆಡಳಿತಕ್ಕೆ ಒಳಪಟ್ಟಿದ್ದು. ಬೀದರ, ಗುಲ್ಬರ್ಗಾ ಮತ್ತು ರಾಯಚೂರು, ಜಿಲ್ಲೆಗಳಲ್ಲಿ ವಾಸವಾಗಿದ್ದ ಹಿಂದೂಗಳು ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ತನು–ಮನ–ಧನದಿಂದ ಸೇವೆಯನ್ನು ಮಾಡಿ ದೇಶದ ನಾಡು–ನುಡಿಗೆ ರಾತೋ ರಾತ್ರೀ ಹೋರಾಡಿ ರಜಾಕರರ ಹೊಡೆತ ಮತ್ತು ತುಳಿತಕ್ಕೆ ಒಳಗಾಗಿ ಸಾವನ್ನಪ್ಪಿದ ಮಹನೀಯರ ತ್ಯಾಗ ಕಡಲಿ ಮಟ್ಟಿಯ ಕಾಶಿಬಾಯಿ ಸತ್ಯಸಾವಿತ್ರೀಯ ಶೀಲದ ಮಹತ್ವ ಬಸವಣ್ಣ ತನ್ನ ಬಸವಣ್ಣ ಮಹಾದೇವಿ, ಶರಣಬಸವೇಶ್ವರ, ರಾಮಾಯಣ–ಮಹಾಭಾರತ ಮುಂತಾದ ಪೌರಾಣಿಕ ಮತ್ತು ಐತಿಹಾಸಿಕ ಕಷ್ಟಗಳ ಕಲ್ಪನೆ ಮತ್ತು ದಾಖಲೆ ನೂರಾರು ವರ್ಷಗಳ ಸಂಸ್ಕೃತಿಯ ಮೂಲ ಸ್ವರೂಪ ಈ ಬುಲಾಯಿ ಹಾಡುಗಳು ಇಂದಿನ ಸಮಾಜದ ಮೇಲೆ ಬೆಳದಿಂಗಳಂತೆ ಬೆಳಕನ್ನು ಚಲ್ಲುತ್ತವೆ.

***ಬುಲಾಯಿ ಹಾಡುಗಳು ವಸ್ತು–ವೈವಿಧ್ಯ:–**

ಹೆಣ್ಣುಮಕ್ಕಳು ಗಂಡನ ಮನೆಯಿಂದ ಬಾಣತನಕ್ಕಾಗಿ ತವರಿಗೆ ಬಂದು ಬಾಣತನ ಮುಗಿಸಿಕೊಂಡು ಹೋಗುವ ಸಂಪ್ರದಾಯವಿದೆ. ಅದಕ್ಕೆ ಮುಂಚೆಯೆ ಗಂಡ ಕರೆಯಲು ಬಂದು ಹೋಗಲು ತಯ್ಯಾರಾಗಿ ಮುನಿಸು ಕೊಂಡು ಹೋಗುವನು ಆಗ ಗಂಡನೇ ದೇವರೆಂದು ತಿಳಿದು ಗರತಿಯ ತಾನಲುಬೇಗ ತಯ್ಯಾರಾಗಿ ಹೋಗುವಾಗ–ತಾಯಿ–ತಂಗಿಯನ್ನು –ಅಂಗಿಯಿಲ್ಲ–ಕುಲಾಯಿವಿಲ್ಲ–ಕುಬಸಿಲ್ಲ ಹ್ಯಾಂಗ–

ಖಳವಲ್ಲಿ ಮಗಳಿಗೆ॥ ರನ್ನಾದೆ ಕೋಲು–ಕೋಲು॥

ಶ್ಯಾವಗಿ ಹಾಕಿದ ಸಕ್ಕರಿ ಹರವೀದ ಉಂಡ್ಹೋಗೆ ಮಗಳೆ ಕಾಶಮ್ಮ

ಹುಣ್ಣಿಮೆ ಮುಂದಿಟ್ಟ ಅಮ್ಮಾಸಿ ಹಿಂದಿಟ್ಟ ಹೋಗಬ್ಯಾಡ ಗೆಳದಿ ಕಾಶಮ್ಮಾ

॥ರನ್ನಾದೆ ಕೋಲು–ಕೋಲು

ಹುಣ್ಣಿಮೆ ಹುರಿಯಲ್ಲಿ ಅಮ್ಮಾಸಿ ಸುಡಲಿ ನಾನು ಹೋಗುವುನೆಂದು

ತಾಯಿ–ತಂದೆ ಗೆಳದಿಯನ್ನು ತಿಳಿಸಿ ಹೋಗುವಳು ಮುಂದೆ

ಗೋರಟಿಯ ಕಥೆಯು ಬೀದರ ಜಿಲ್ಲೆಯಲ್ಲಿ ನಡೆದಿರುವ ಒಂದು

ಪ್ರಮುಖ ಘಟನೆಯಾಗಿದೆ:–

*ಗೊರಟಿ ಗ್ರಾಮದಖಾಸ ಧನಲಕ್ಷ್ಮಿಯವಾಸ

ಇದರ ಮೇಲೆ ತುರುಕುರ ಮನಸ ॥ಕೋಲೆಣ್ಣ ಕೋಲ॥

ರಜಾಕರರ ರಚನಾಯ್ತು ತುರುಕುರದೆ ಮುರದೆ ಹೋಯ್ತು

ಹಿಂದುಸ್ತಾನ ಗೆದ್ದು ಬಂತು ॥ಕೋಲೆಣ್ಣ ಕೋಲ॥

ಆಗಿರುವ ಘಟನೆಯಲ್ಲಿ ಊರಿನ ಪ್ರತಿಯೊಬ್ಬ ಹೆಣ್ಣುಮಕ್ಕಳು, ಗಂಡು

ಮಕ್ಕಳು, ಟೊಂಕಕಟ್ಟಿ ನಿಲ್ಲುವರು, ಊರಬಿಟ್ಟು-ಎಲ್ಲೊ ಆಶ್ರಯ

ಪಡೆದುಕೊಳ್ಳುವರು. ಕೊನೆಗೆ ನಮ್ಮ ತಿರಂಗಿ ಝುಂಢಾವನ್ನು ದಿಲ್ಲಿಯ ಮೇಲೆ:-

ಏರಿತು-ಐದು ನಿಮಿಷದೊಳಗೆ ನಿಜಾಮ ದೊಳಗೆ,

ರಝಾಕರರಿಗೆ ಹಾಕ್ಯಾರೋ ಕಳಕಿಸೂಡಿನ ಹಾಗೆ॥ ರನ್ನದೇ.

ಕೆಂಪಮಾರಿ ಹುಳಗಳು ಬಂದು ತಂಪನ್ನೆಲ್ಲ ಮೈದಿದ್ದವು.

ತಂಪಬಿಟ್ಟು ಕೊಂಪ್ಹ್ಯಾರೆದರು॥ ರನ್ನದೆ ಕೋಲು ಕೋಲ॥*

ಪ್ರತಿಯೊಬ್ಬ ವ್ಯಕ್ತಿಯು ಸತ್ಯವಂತನಾಗಿ ಬಾಳಬೇಕು, ಮಾಡಿದ್ದುಣ್ಣೊ ಮಹಾರಾರಯ ಎನ್ನುವಂತೆ, ಕೊನೆಗೆ, ಹಾಡುಗಳು ತನ್ನದೇ ಆದ ವಸ್ತುಸ್ಥಿತಿಯನ್ನು ಮತ್ತು ವೈವಿದ್ಯತೆಯನ್ನು ತಿಳಿಸುತ್ತದೆ. ಒಟ್ಟಾರೆ ಬುಲಾಯಿ ಹಾಡುಗಳು ಬೀದರ ಜಿಲ್ಲೆಯ ಜನಪದ ಸಾಹಿತ್ಯದಲ್ಲಿ ತನ್ನ ಮೈಲಿಗಲ್ಲನ್ನು ಸಾಧಿಸಿದ

**ಬುಲಾಯಿ ಹಾಡುಗಳು:-**

ಶ್ರೀ ಗುರು ಗೋರಖನಾಥ

ವೈರಾಗ್ಯ ಶಾಲಿವಂತ, ಭಕ್ತರಿಗೆ ಒಲಿಯೋ ಸನ್ಯಸ್ಥ॥ ಕೋಲೆಣ್ಣಾ ಕೋಲ॥ ॥1॥

ಹೈದರಾಬಾದಿನ ಬೀದರ ಜಿಲ್ಲಾ, ರಝಾಕರ ಪುಂಡರೆಲ್ಲ, ದಂಡೆತ್ತಿ

ಬಂದಾರೋ ಗೋರಟಿಮ್ಯಾಲಾ॥ಕೊ॥ ॥2॥

ಗೋರಟಿ ಸುದ್ದಿಯನ್ನು, ಕೇಳಿರಿ ನೀವಿನ್ನು,

ತಿಳಿದ ಮಟ್ಟಿಗೆ ಹೇಳುವೆ ನಾನು ॥ಕೋ॥ ॥3॥

ಗೋರಟಿ ಗ್ರಾಮಖಾಸ, ಧನಲಕ್ಷ್ಮಿಯಾಸ,
ಇದರ ಮೇಲೆತುರಕರ ಮನಸ ॥ಕೋ॥ ॥4॥
ಹದಿನೆಂಟು ನೂರಾ ಎಪ್ಪತ್ತು ಶಾಲಿವಾಹನ ಶತಾಬ್ದಿಯ ಕ್ರಾಂತಿ
ಯಾಯಿತ್ತೋ ಗೋರಟಿಯಲ್ಲಿ ॥ಕೋ॥ ॥5॥
ಮಿತಚೈತ್ರ ಅಮವಾಸಿ ದಿನ, ಮುಂಜಾನೆ ಸೂರ್ಯಗ್ರಹಣ
ನೇಮಿಸ್ತ ಮಾಡೀರೋ ಆ ದಿನ ॥ಕೋ॥ ॥6॥
ಹುಮನಾಬಾದಿ, ರಾಜೇಶ್ವರ, ಕಲ್ಯಾಣ ಜಹಗೀರ,
ನೆರದಾರೋ ರಜಾಕರ ॥ಕೋ॥ ॥7॥
ಕಂಬಾರ ಚಿಂಚೋಳಿ, ನಾವದಗಿ ಬೆಲ್ಲಳ್ಳಿ,
ಹೊಂಟಾರೋ ಎಲ್ಲಾರು ಗೋಳಿ ॥ಕೋ॥ ॥8॥
ಹುಣಸನಾಳ; ವರವಟ್ಟಿ ತುರುಕರಿಗಿಲ್ಲ
ಚಿಂದೋಟ್ಟಿ ಗೋರಟಿ ಹೋಗುದು ಮುಂಜಾನೆ ಘಟ್ಟಿ ॥ಕೋ॥ ॥9॥
ಘೋರವಾಡಿ ಮುಖ್ಯ ಕೇಂದ್ರ ಲಂಗ್ಯ ತುರುಕರ ಚೋರ
ಮಾಡ್ಯಾರೋ ಅಲ್ಲಿ ಕರಾರ ॥ಕೋ॥ ॥10॥
ತೋಗಲೂರ, ಮುಚಳಂಬಿ, ಬೋರೋಳ ಮೊರಂಬಿ,
ಏನಿಲ್ಲದೆ ಉರದೋರೊ ಮೈತುಂಬಿ ॥ಕೋ॥ ॥11॥
ಖಾಸಿಮ ರಜವಿಯನ್ನು,ಬೋಧಾಮಾಡಿದವರನ್ನು, ಎಲ್ಲಾರು
ಕೂಡಿ ಮುಕತಾರ ಮಣ್ಣು ॥ಕೋ॥ ॥12॥
ಮಂಜಾನೆಂಟು ತಾಸಿಗೆಮು, ದನಕರು ಬಿಡುವದರೊಳಗೆ,
ಸೂರುಮಾಡ್ಯಾರ ಗೋಲಿ ಬರುವಾಗೆ ॥ಕೋ॥ ॥13॥
ಊರೊಳಗಿನ ಜನರೆಲ್ಲ, ಏರ್‍ಯಾರೋ ಮಾಳಿಗಿ ಮ್ಯಾಲಾ,
ಮುಂದಿನ ಆಶೆ, ಒಬ್ಬರಿಗಿಲ್ಲ ॥ಕೋ॥ ॥14॥
ಜೀವ ಹೋದರ ಪರವಿಲ್ಲ, ಓಡಿ ಹೋಗುವರಲ್ಲ, ಹೀಗೆಂದು
ನುಡುದಾರೋ ಹಿಂದುರೆಲ್ಲ ॥ಕೊ॥ ॥15॥
ಈ ಶಬ್ದ ತುರುಕರು ಕೇಳಿ, ಹಾಕ್ಯರೋ ಮತ್ತಿಷ್ಟು ಗೋಲಿ, ॥16॥
ಮಳಿಸುರದಂಗ ಬಂದೂಕ ಗೋಲಿ ॥ಕೋ॥
ಡುಮ್ಮಣೆ ಸಾಹುಕಾರ, ಮಾಳಗಿಮ್ಯಾಲ ಬಿಜಲೊಟಬಾರ ಕಲ್ಲು

ಕವಣಿಯ ಜೋರ ॥ಕೊ॥ ॥17॥

ಈ ಕ್ರಾಂತಿ ಕಾರ್ಯದೊಳಗೆ, ಹೆಣ್ಣುಮಕ್ಕಳು ಆವಾಗ,

ಟೊಂಕ ಕಟ್ಟಿ ನಿಂತರು ಮೇಲೆ ॥ಕೊ॥ ॥18॥

ಹೆಣ್ಣುಮಕ್ಕಳು ಕಲ್ಲು ಕೊಡುವರು, ಗಂಡಸರು ಹೊಡಿಯುವರು,

ಮುರು ತಾಸು ಹಟಾಸಿದರು ॥ಕೊ॥ ॥19॥

ಹಿರೇವ್ಮಠದ ಮಾಳಿಗಿಮ್ಯಾಲೆ, ತರುಣ ಜನರು ಅಲ್ಲೆ,

ಕವಣಿಯ ಕಲ್ಲು ಜೋರ ಮ್ಯಾಲೆ ॥ಕೊ॥ ॥20॥

ಹತಿಯಾರಿದ್ದಿಲ್ಲಿವರಲ್ಲಿ ಬರೆ ಕಾವಣಿ ಜೋರಿಲಿ,

ಬರಗುಡದಿಲ್ಲ ಒಬ್ಬರಿಗಿ ಬದಲಿ ॥ಕೊ॥ ॥21॥

ಏಳೆಂಟು ಮಂದಿಚಿತ್ತ ಮಾತಾಡೆರ ಏಕಾಂತ,

ಓಡಿಹೋಗುವದು ವ್ಯರ್ಥ ॥ಕೊ॥ ॥22॥

ಇದೇ ಅಭಿಮಾನಕ್ಕೆ ಬಿದ್ದು ಜೀವ ಹೋದರು ಹೋಯಿತೆಂದು

ರಾಚಯ್ಯಾ ಸ್ವಾಮಿ ಮುಂದೆ ಬಂದು ॥ಕೊ॥ ॥23॥

ರಾಚೋಟಿಸ್ವಾಮಿ ಇವರು, ಗೋರಟಿ ಮಠಪತಿಯವರು

ತುರಕನಿಗೆ ಒಂದೇಟು ಕೊಟ್ಟಿದ್ದರು ॥ಕೊ॥ ॥24॥

ಪೆಟ್ಟ ತಿಂದ ತುರುಕನ ಹೆಸರು ಎಮ್ಮಿ ಮಸ್ತಾನ,

ಹೆಚ್ಚಿನ ಸಿಟ್ಟು ತೆಗೆದಿದಾನ ॥ಕೊ॥ ॥25॥

ಉರಿಯು ಬಹಳ ಎದ್ದಿತು ದನದನ ಉರಿಯುತ್ತ ಊರುಸುತ್ತ

ಹರಿದಾಡುತ್ತಾ ॥ಕೊ॥ ॥27॥

ಉರಿಯನ್ನು ನೋಡಿದವರು, ಗಾಬರಿ ಗೊಂಡಿದರು, ಡುಮೇಣನ

ದೊಡ್ಡಿ ಸೇರಿದರು ॥ಕೊ॥ ॥28॥

ದೊಡ್ಡಿ ಮೇಲಿದ್ದವರು, ಎಂಟು ಹತ್ತು ಶೂರ ಜನರು, ಬಿಜಲೋಟ

ಹತಿಯಾರಾದವರು ॥ಕೊ॥ ॥29॥

ನಾಗಪ್ಪ, ಹಳೆಂಬರ ಈತನು ಬಹದ್ದೂರ,

ಮಹಡಿ ಮೇಲಿನವರ ಜೋರ ॥ಕೊ॥ ॥30॥

ತುರಕರು ಸೇರಿ ಊರೊಳಗ, ಮನಸಿಗೆ ಬಂದಹಾಗ,

ನಡೆಸಿದರೋ ಹೆಚ್ಚಿನ ದಂಗ ॥ಕೊ॥ ॥31॥

ಸಿಕ್ಕಷ್ಟು ಜನರಿಗೆ, ಹೊಡದಾರೋ ಜಗಿಜಗಿ,

ಒಬ್ಬರ ಸುದ್ದಿ ಇಲ್ಲದಂಗಾಗಿ ॥ಕೊ॥ ॥32॥

ಆವಾಗ್ಗೆ ರಝಾಕರರು, ಹಿರೇಮಠಕ್ಕೆ ಬಂದಿದ್ದರು ಬಾಗಿಲ

ತೆರೆಯರೆಂದಿದರು ॥ಕೊ॥ ॥33॥

ತೆರೆಯಿರೆಪ್ಪ ಬಾಗಿಲ್ಲ, ನಿಮಗೇನು ಮಾಡುವದಿಲ್ಲ,

ಹೀಗಂತರ ರಝಾಕರೆಲ್ಲ ॥ಕೊ॥ ॥34॥

ಮಾಡುವರೇನು ಇಲ್ಲಿ, ಮನಸ್ಸಿಗೆ ತಿಳಿದಾನಲ್ಲಿ,

ರಾಚಯ್ಯಾಸ್ವಾಮಿ ಬಂದಾನಲ್ಲಿ ॥ಕೊ॥ ॥35॥

ಬಾಗಿಲ ತೆರೆಯುವಷ್ಟರಲ್ಲಿ ಹೊಡೆದಾರೋ

ಬರ್ಚಿಲಿ, ನಟ್ಟಿತೋ ಹೊಟ್ಟೆಯಲ್ಲಿ ॥ಕೊ॥ ॥36॥

ಅಯ್ಯೋ ಶಿವ ಭಗವಂತ, ವ್ಯಾಳೆ ಹೆಂತಾದು ಬಂತ,

ಆಯಿತೋ ಈದಿನ ಘಾತ ॥ಕೊ॥ ॥37॥

ಎಮ್ಮಿಯ ಮಸ್ತಾನನು, ಅಂಗಳಾಗ ಹಾಕಿದನು,

ಮೈಯೆಲ್ಲ ಗಾಯ ಮಾಡಿದನು ॥ಕೊ॥ ॥38॥

ಏ ಅಯ್ಯ ಮಗನ, ಕಲ್ಲು ಹೊಡೆದವನೀನ,

ಹೊಡೆಯುವೆನು ಜೀವ ಹೋಗೋತನ ॥ಕೊ॥ ॥39॥

ರಾಚಯ್ಯ ನೆಲಕ್ಕೆ ಬಿದ್ದು ತುರುಕನಿಗೆ ಸಿಟ್ಟಿಗೆದ್ದು,

ಬೈದಾನೋ ಮನಸ್ಸಿಗ ಬಂದು ॥ಕೊ॥ ॥40॥

ಈ ಶಬ್ದ ತುರುಕ ಕೋಳಿ, ಎದ್ದಾನೋ ಜೋರಿಲಿ,

ಮತ್ತೊಂದು ಹೊಡೆದಾನೋ ಬೆನ್ನಿನಲ್ಲಿ ॥ಕೊ॥ ॥41॥

ಹೊಟ್ಯಾಗಾಗಾಯದೋಬೆಂಕಿ ಬುಕ್ಕುತಾನೋ

ಮಣ್ಣುಫಕ್ಕಿ , ಒಡಕೊಂಡನ ಕೈಕಾಲು ತಿಕ್ಕಿ ॥ಕೊ॥ ॥42॥

ವಚಿದೇ ಮಾತರವ್ಮೇಂದು, ಘೋಷಣೆ ಮಾಡ್ಯಾನೋ ಬಿದ್ದು

ಜೀವ ಹೋಯಿತು ಆಗ ಅವೆಂದು ॥ಕೊ॥ ॥43॥

ದೇಶಸೇವೆಯ ಖಣಿ, ಮಾತೃ ಭೂಮಿಗೆ–ಧಣಿ,

ಸುಜ್ಞೇರು ಹೇಳಿದೀವಾಣಿ ॥ಕೊ॥ ॥44॥

ಶಂಕರಪ್ಪ ಪತಂಗೆ, ಇವನಿಗೆ ಹೊಡದಾರಾಗೆ,

ಇವನ ಸುದ್ದಿ ಕೇಳಿರೀಗೆ ॥ಕೊ॥ ॥45॥

ಗುಂಡಮಂದಿ ಬಂದಾವೆಂದು, ತುರುಕರ ಮನಿಗೆ ಬಂದು,

ಹೆಣ್ಣುಮಕ್ಕಳಿಗೆ ಕೈಕಾಲು ಬಿದ್ದು॥ಕೊ॥ ॥46॥

ಏ ಎವ್ವಾ ನಮ್ಮವ್ವ, ಮಗನಚಿತೇ ನಾನವ್ವ,

ಉಳಸಿಕೊಳ್ಳರೇ ನನ್ನ ಜೀವ ॥ಕೊ॥ ॥47॥

ಮುಸುಲರ ಹೆಂಗಸರು, ಅವನನ್ನು ಕರೆದೊಯಿದಿದರು,

ಮನೆಯೊಳಗೆ ಅಡಗಿಸಿದರು ॥ಕೊ॥ ॥48॥

ತುರುಕರು ಅಲ್ಲಿಗೆ ಬಂದು ಕೇಳುತಾರೋ ಜೆಬ್ರಿಲಿಂದು,

ಹಿಂದೂಗ ಇಟ್ಟರೇನು ತಂದು ॥ಕೊ॥ ॥49॥

ಅದರೋಳಗೆ ಒಂದು ಹೆಂಗಸ, ಹೇಳ್ಯಾಳೋ

ಬಹು ಸೊಗಸ, ಮನೆಯೊಳಗಹನ ಒಬ್ಬ ಗಂಡಸ ॥ಕೊ॥ ॥50॥

ಎಲ್ಲಿಟ್ಟಿರಿ ತೋರಿಸೆಂದು ಮನೆಯೊಳಗೆ ಬಂದು, ಬಚ್ಚಿದವನಿಗೆ

ಹೊಡದಾರೊಂದು ॥ಕೊ॥ ॥51॥

ಎಳಕೊಂಡು ತಂದಾರೋ ಹೊರಗ ಕಡಕೊಂಡು ಬಿದ್ದಾನೋ ನೆಲಕ

ಎದಿಮ್ಯಾಲೆ ಕೂತಾನೋ ತುರುಕ ॥ಕೊ॥ ॥52॥

ಅಯ್ಯೋ ಶಿವ ಮಹಾದೇವ ಗತಿ ಏನೋ ಗುರುದೇವ,

ಎನಗೇ ತಾರಸೋ ಭಕ್ತ ಬಾಂಧವ ॥ಕೊ॥ ॥53॥

ಶೆಂಕರೆಪ್ಪನಿಗೆ ಪೆಟ್ಟಾ ಹಾಕ್ಯಾರೋ ತಲವಾರಾ ಏಟಾ,

ಕಡದಾವೋ ಕೈಕಾಲು ಬಟ್ಟಾ ॥ಕೊ॥ ॥54॥

ಮತ್ತೋಬ್ಬ ಹಿಂದೆ ಬಂದು, ಹೊಡದಾನೋ

ಬರ್ಚಿಲೆಂದು ಬಿದ್ದಾದೋ ಕೊರಳಲ್ಲಿ ಒಚಿದು ॥ಕೊ॥ ॥55॥

ಅಲ್ಲಿಂದವನಿಗೆ ಪೆಟ್ಟು, ಹಾಕ್ಯಾರೋ ಬೇಕಾದಷ್ಟು,

ಜೀವ ಹೋಯಿತೆಂದು ಹೋಗ್ಯಾರೋ ಹೊಂಟು ॥ಕೊ॥ ॥56॥

ತಾಸ ಹೊತ್ತಿನಾ ಮ್ಯಾಲೆ, ಸ್ಮೃತಿ ಬಂತೋ ದೇಹದಮ್ಯಾಲೆ,
ಮನಿಗೆ ಹೋಗ್ಯಾನೋ ಆಮ್ಯಾಲೆ ॥ಕೊ॥ ॥57॥

ದೇವರ ಮನಿಯೊಳಗೆ ಅಡಗಿಕೂತಾನೋ ಆಗೆ,
ದೇವರ ಧ್ಯಾನ ಮನದೊಳಗೆ ॥ಕೊ॥ ॥58॥

ತುರುಕರು ಬಂದಿದ್ದರು, ಮನೆಯೊಳಗೆ ಸೇರಿದ್ದರು,
ಪ್ರತ್ಯಕ್ಷ ಅವನಿಗೆ ನೋಡಿದರು ॥ಕೊ॥ ॥59॥

ಎಳತಂದಾರೋ ಅಂಗಳಾಗ, ಹಾಕ್ಯಾರೋ ಕಣಕಿಯೊಳಗೆ,
ಹಚ್ಚ್ಯಾರೋ ಬೆಂಕಿ ಆಗ ॥ಕೊ॥ ॥60॥

ಆಮೇಲೆ ರಝಾಕರರು, ಜೀವ ಹೋಯಿತೆಂದಿದರು,
ಮನೆ ಹೊರಗೆ ಒಗಿದರು ॥ಕೊ॥ ॥61॥

ಗುರುವಿನ ಕೃಪೆಯಿಂದ, ಉರಿಯೊಳಗಿಂದ,
ಶೆಂಕರೆಪ್ಪ ಬದುಕಿ ಬಂದ ॥ಕೊ॥ ॥62॥

ಬಸಪ್ಪ ಇವರು, ಮಾಲಿಯ ಗೌಡರು,
ಸೀರಿಯ ಉಟ್ಟು ಕೂತಿದ್ದರು ॥ಕೊ॥ ॥63॥

ತುರುಕರು ಬಂದಿದ್ದರು, ಎಳಕೊಂಡು
ತಂದಿದಾರು ಲಕ್ಷ್ಮೀಗುಡಿ ಮುಂದೆ ಕೊಂದಿದರು. ॥ಕೊ॥ ॥64॥

ಬಸಪ್ಪ ಪೋಲಿಸಗೌಡ, ಅಣ್ಣ ತಮ್ಮಂದಿರು ಜೋಡ,
ತುರುಕರು ಇಲ್ಲಿಗೆ ಬಂದಾರೋ ದೌಡ ॥ಕೊ॥ ॥65॥

ಗೌಡ ಹಿರಿಯಣ್ಣನು ಸೀರಿ ಉಟ್ಟು ಕೊಂಡಿದನು,
ತಾಯಿಯ ಬಳಿಯಲ್ಲಿ ಕೂತಿದ್ದನು ॥ಕೊ॥ ॥66॥

ಮೋಸ ಮಾಡಿ ತುರುಕರು ಗೌಡನ ಬಳಿ ಬಂದಿದ್ದರು,
ಕೈ ಹಿಡಿದು ಎಳದಿದರು ॥ಕೊ॥ ॥67॥

ಗೌಡನ ತಾಯಿಯೊಳು ಬೇಡಿದ್ದ ದ್ರವ್ಯ ಕೊಟ್ಟಿದ್ದಳು,
ಜೀವದಾನ ಬೇಡಿದಳು ॥ಕೊ॥ ॥68॥

ನಿನ್ನ ಮಗನಿಗೆ ಹೊಡೆಯುವುದಿಲ್ಲ,
ಮಗನಂತೆ ನಾವೆಲ್ಲ, ಹೀಗಂತರ ತುರುಕೆರೆಲ್ಲ ॥ಕೊ॥ ॥69॥

ಗೌಡನ ಕೈ ಹಿಡಿದು, ಎಳಕೊಂಡು ಹೊರಗೆ ತಂದು,

ಹೊಡದಾರೋ ಬಂದೂಕಲಿಂದು ॥ಕೊ॥ ॥70॥

ತಾಯಿ ಎದ್ದಾಳಲ್ಲಿಂದು, ಧಾವಿಸಿ ಮುಂದೆ ಬಂದು,

ಶವ ನೋಡಿ ಕಡಕೊಂಡು ಬಿದ್ದು ॥ಕೊ॥ ॥71॥

ಇವನಿಗೆ ನೋಡುವಷ್ಟರಲ್ಲಿ, ಸಣ್ಣವನಿಗೂ ಹೊಡದಾರಲ್ಲಿ,

ತಾಯಿ ನೋಡ್ಯಾಳೆ ಕಣ್ಣಿಲಿ ॥ಕೊ॥ ॥72॥

ದು:ಖಿಸುತ್ತಾ ಬಿದ್ದಿದ್ದಳು, ಶವದಮೇಲೆ ಉರುಳದಳು,

ಮಗನಧ್ಯಾನ ಮನದೊಳು ॥ಕೊ॥ ॥73॥

ಗುರುಪಾದಪ್ಪ ಪೋಲೀಸಗೌಡ, ಗಾಬರಿಯಾಗಿ ಒಡ್ಯಾನ ದೌಡ,

ಕಡದಾರೋ ಇವನಿಗೆ ತುಂಡ ॥ಕೊ॥ ॥74॥

ರಾಮರಾವ ಕುಲಕರ್ಣಿ, ದೇಶಸೇವೆಯ ಖೂಣಿ,

ಮಾತೃ ಭೂಮಿಗೆ ಧಣಿ ॥ಕೊ॥ ॥75॥

ನಾರಾಯಣ ಮೊಕ್ತೇದಾರ, ಚನ್ನಪ್ಪ, ಬಿರಾದಾರ

ಇವರಿಗೆ ಹೊಡದಾರೋ ಠಾರ ॥ಕೊ॥ ॥76॥

ಗೋರಟ ಊರೊಳಗೆ, ಹೊಡದಿದ ಜನರಿಗ,

ಲೆಕ್ಕ ಹತ್ತಿಲ್ಲೋ ಆವಾಗ ॥ಕೊ॥ ॥77॥

ನಡೆದಾದೋದಂಗೆ ಚೋರ, ರಾತ್ರಿ ಮುರನೇ ಪ್ರಹಾರ,

ಆಗ್ಯಾರೋ ಎಲ್ಲರು ಫರಾರ ॥ಕೊ॥ ॥78॥

ಗೋರಟ ಉರಿಯುವುದೆಲ್ಲ, ಹನ್ನೆರೆಡು ಮೈಲಿನ ಮ್ಯಾಲ,

ಕಾಣ್ಯಾದೋ ಅವರಿಗೆಲ್ಲ ॥ಕೊ॥ ॥79॥

ನೋಡಿದ ಜನರೆಲ್ಲ, ನುಡಿತಾರೋ ಹೀಗೆಲ್ಲ,

ಹೀಗೆಂದು ಅಗ್ನಿ ನೋಡಿಲ್ಲ ॥ಕೊ॥ ॥80॥

ಗೋರಟ ಸುದ್ದಿ ತಾರ, ದೇಹಲಿಗೆ ಹೋಗ್ಯಾವೋ ನೂರ,

ನೆಹರು ತಗೆದಾರ ಕಣ್ಣನೀರ ॥ಕೊ॥ ॥81॥

ಈ ಮಂದಿ ಅಡವಿ ಬಿದ್ದು ಹೋಗ್ಯಾರೋ ಮುಂಬಯಿ ಹಿಡಿದು,

ಆರು ತಿಂಗಳ ಅಲ್ಲೇಯಿದ್ದು ॥ಕೊ॥ ॥82॥

ಪ್ಮಣೆ, ಸೋಲಾಪುರ, ಹುಟಗಿ, ವಿಜಾಪೂರ,

ಗೋರಟಾ ಮಂದಿ ಭರಪೂರ ॥ಕೊ॥ ॥83॥

ಟಿಕ್ಕೆ ಕರವಾಡಿಯಲ್ಲಿ, ಸದ್ಧರ್ಮ ಗುರುಕುಲದಲ್ಲಿ,

ಓಡಿ ಹೋದವರ ವ್ಯವಸ್ಥಾ ಅಲ್ಲಿ ॥ಕೊ॥ ॥84॥

ಗುರುಕುಲಸ್ಥಾಪಕರು, ಸಿದ್ದವೀರಸ್ವಾಮಿ

ಬನಹಟ್ಟಿಯವರು, ಅನ್ನ ಛತ್ರ ಇಟ್ಟಿದ್ದರು ॥ಕೊ॥ ॥85॥

ಸಂಸ್ಥೆ ಸಂಚಾಲಕರು, ಸುರೇಶಸ್ವಾಮಿವರು,

ಜನತಾ ಸೇವೆ ಮಾಡಿದರು ॥ಕೊ॥ ॥86॥

ಮೋಹಕರ ಪಟ್ಟದೇವರು, ಗುರು ರಾಚೋಟೇಶ್ವರರು,

ಬಹು ಸಾಹಸ ನೀಡಿದರು ॥ಕೊ॥ ॥87॥

ಗುರುಕುಲ ಕಾರ್ಯಕರ್ತರು,

ಕಾಶೀನಾಥಸ್ವಾಮಿಗಳು, ಇವರು ಶ್ರಮಪಟ್ಟಿದ್ದರು ॥ಕೊ॥ ॥88॥

ವರಹಾಡ ಪ್ರಾಂತದೊಳಗೆ, ಕವಠಳ ಗ್ರಾಮದೊಳಗೆ,

ಈ ಜನರು ಹೋಗ್ಯಾರಲ್ಲಿಗೆ ॥ಕೊ॥ ॥89॥

ಕವಠಳ ಬಳವಂತಪ್ಪ, ಅಣ್ಣನಾದ ಯಶವಂತಪ್ಪ,

ಈರ್ವರು ಸಹಾಚು ನೀಡಿದರು ॥ಕೊ॥ ॥90॥

ಲಾತೂರ ಖಾಸಿಮನು, ಜೋಕುಮಾರನಂತಿವನು,

ರಝಾಕಾರಾಗಿ ಉರಿದಿದ್ದನು ॥ಕೊ॥ ॥91॥

ನಿಜಾಮ ರಾಜ್ಯದೊಳಗೆ ಹೆಣ್ಣುಮಕ್ಕಳಿಗೆ,

ಅತ್ಯಾಚಾರ ಮಾಡಿದರಾಗೇ ॥ಕೊ॥ ॥92॥

ಭಾರತಾಂಬೆ ನೋಡಿದಳಾಗ ವನಿತೇಯರ ಮಾನಭಂಗ,

ಸುರುಮಾಡ್ಯಾಳೋ ಸೇಡು ಮುಸಲರ ಮ್ಯಾಲ ॥ಕೊ॥ ॥93॥

ರಾಜಸ ರಾಕ್ಷಸ ರಾವಣನಚಿತೆ ಈ ಅರಸ,

ಅವನಂತೆ ಆಗುವದು ಸತ್ಯಾನಾಶ ॥ಕೊ॥ ॥94॥

ನೆಹರು, ರಾಜಾಜಿಯವರು, ವಲ್ಲಭಭಾಯಿ ಪಟೇಲರು,
ಮೂವರು ರಾಯ ಮಾಡಿದರು ॥ಕೊ॥ ॥95॥

ಈ ಕೊಲೆಯ ಸುದ್ದಿ ಹೋಗಿ, ನೆಹೆರು ಮನದೊಳಗೆ ಮರುಗಿ,
ಹಿಂದೂಸ್ತಾನ ಸೈನ್ಯ ತಯಾರಾಗಿ ॥ಕೊ॥ ॥96॥

ಹದಿಮೂರ ಸಪ್ಟೆಂಬರ, ಮಿಲಟ್ರಿಯು ತಯ್ಯಾರ,
ನಿಜಾಮ ಸುತ್ತ ಹಾಕ್ಯಾರೋ ಘೇರ ॥ಕೊ॥ ॥97॥

ಉಸ್ಮಾನಾಬಾದಿಯಲ್ಲಿ, ರಝಾಕರ ಮಂದಿ ಅಲ್ಲಿ,
ಬಂದಾದೋ ಮಿಲ್ಟ್ರೀ ಜೋರಿಲಿ ॥ಕೊ॥ ॥98॥

ಐದು ನಿಮಿಷದೊಳಗೆ, ಈ ರಝಾಕಾರರಿಗೆ,
ಹಾಕ್ಯಾರೋ ಕಣಕಿ ಸುಡೀನ ಹಾಗೆ ॥ಕೊ॥ ॥99॥

ಅಲ್ಲಿಂದ ವಿಜಯ ಗೆದ್ದು, ನಳದುರ್ಗಕ್ಕೆ ಬಂದು,
ಬಿಟ್ಟಾರೋ ಬಾಂಬ ಒಚಿದು ॥ಕೊ॥ ॥100॥

ಅಲ್ಲಿದ್ದ ತುರುಕರೆಲ್ಲ, ಅಂತಾರೋ ಅಲ್ಲಾ! ಅಲ್ಲಾ!
ಖಾಸಿಮ ರಜವಿ ಮ್ಯಾಲಕಲ್ಲ ॥ಕೊ॥ ॥101॥

ಕಲ್ಯಾಣ, ಜಹಗೀರ, ಅಲ್ಲದ್ದ ರಝಾಕರ, ಘುನ್ನ ಟೋಪಿ
ಹಾರ್‍ಯವೋ ಫರಾರ ॥ಕೊ॥ ॥102॥
ರಾಸೂರ ಹುಮನಾಬಾದಿ, ಬೀದರ, ಜಹರಾಬಾದಿ,
ಹೋಗ್ಯಾರೋ ಹೈದರಾಬಾದಿ ॥ಕೊ॥ ॥103॥
ಮೂರು ದಿವಸದೊಳಗೆ, ನಿಜಾಮ ರಾಜ್ಯದೊಳಗೆ,
ತ್ರಿರಂಗಿ ದ್ವಜ ಮೆರದಿತಾಗೆ ॥ಕೊ॥ ॥104॥
ರಾಮಚಂದ್ರನಂತೆ ಇವರು ರಝಾಕಾರರಿಗೆ ನೆಹರು,
ನಿರ್ಮೂಲ ಮಾಡಿದರು ॥ಕೊ॥ ॥105॥
ಗೋರಟಿ ಜನರಿಗೆ, ನೆಹರೂಜೀ ಆವಾಗೆ,
ಆಜ್ಞೆ ಮಾಡಿದರಾವಾಗೆ ॥ಕೊ॥ ॥106॥
ಹೈದರಾಬಾದ ವಿಜವಾಯಿತ್ತು, ವಿಜಯ ದಶಮಿಯು ಬಂತು,
ದ್ವಜ ಏರಿತ್ತು ॥ಕೊ॥ ॥107॥
ಸರ್ವಧಾರಿ ಸಂವತ್ಸರ, ಪದ ಮುಗಿಯಿತು
ಗುರುವಾರ ಕವಿಕೃತ ವಿರುಪಾಕ್ಷ ವೀರ ॥ಕೊ॥ ॥108॥

# ಅಡಿ ಟಿಪ್ಪಣಿಗಳು

1 ಝುರನಾಥಪ್ಪಾ ರಾಜೇಶ್ವರ ಅವರಿಂದ ನೇರ ಮಾಹಿತಿ

2 ಜಗನ್ನಾಥ ಹೆಬ್ಬಾಳೆ, ಬೀದರ ಜಿಲ್ಲಾ ದರ್ಶನ ಪು.185

3 ಅದೇ, ಪು.186

4 ಅದೇ, ಪು.189

5 ವೀರುಪಾಕ್ಷಯ್ಯಾ ಶಿವಲಿಂಗಯ್ಯಾ ಮಠಪತಿ ಹೈದ್ರಾಬಾದ ಕರ್ನಾಟಕದ ಜಲಿಯಾನ ವಾಲಬಾಗ ಗೋರ್ಟಾ, ಪು.27–32

6 ಗೋಪಾಲರಾವ ಹೆಜೀಬ್, ಹೈದ್ರಾಬಾದ ಮುಕ್ತಿ ಸಂಘರ್ಷ ಪು.135–136

*ಬುಲಾಯಿ ಹಾಡು:-

ಪಂದ್ರಾ ಅಗಸ್ಟನ ಬಿಟ್ಟು ಇಂಗ್ರೇಜ್ ಹೋಗ್ಯಾರ ಹೊರಟು
ಈ ಜನತಾಕರೆಗೆ ಕಾರಭಾರ ಕೊಟ್ಟ ಕೋಲು-ಕೋಲು
(ಈ ಜನತಾಕರಗೆ)

1) ಮಾಸೀಂಗಗ ಏರಿತ ಸಿಟ್ಟ ಕೈದಾಗ ಬೀಜದ ನೋಟ
ತಾಲೂಕದಾರಿಗೆ ಹೊಡಿಸಿ ಬಿಟ್ಟು ಕೋಲು-ಕೋಲು
(ಈ ಜನತಾಕರಗೆ)

2) ಪೋಲಿಸಿಗಿ ಬಂದ್ರಿ ದೌಡ ಊರಲ್ಲಿ ಕುಲಕಣ್ಣಿ
ತೆರಪ್ಯಾ ಕೊಡರಿ ಹೋಗಲಿ ಪೀಡಾ ಕೋಲು-ಕೋಲು
(ಈ ಜನತಾಕರಗೆ)

3) ರುಚಿ-ಹತ್ತಿ ತಿಂದಾರ ಕತ್ತಿ ಹಿಡಿದಾರ ಮನೆಮಾಲಿಕನ ಕಟ್ಟಿ
ಬೆಳ್ಳಿ-ಬಂಗಾರ ಎಲ್ಲೆಲ್ಲಿ ಇಟ್ಟು ಕೋಲು-ಕೋಲು
(ಈ ಜನತಾಕರಗೆ)

4) ಏನು ಹೇಳಲಿ ಹುಡುಗಿ ಕೈದಾಗ ಹಿಡಿದಾರ ಬಡಗಿ
ಒಬ್ಬರ ಮನಿದಾಗ ಇಟ್ಟಿಲ್ಲ ಗ್ವಡಗಿ ಕೋಲು-ಕೋಲು
(ಈ ಜನತಾಕರಗೆ)

5) ಹೊಲಕರೆ ಹೊಯಿದಾರ ಎಳದು ಕಳಿದಾರ ಮೈಯಾಂಗಿಂದ ಬಟ್ಟಿ
ಅಂತ:ಕರಣ ಇಲ್ಲದ ಹಿಡದಾರ ರಟ್ಟಿ ಕೋಲು-ಕೋಲು
(ಅಂತ:ಕರಣ ಇಲ್ಲದ ಹಿಡದಾರ)

6) ತೊಟ್ಟಿಲದಾಗ ಮಲಗ್ಯಾರ ಕೂಸ
ಅಂತ:ಕರಣ ಇಲ್ಲದ ಹೊಡೆದಾರ ಕೋಲು-ಕೋಲು
(ಅಂತ:ಕರಣ ಇಲ್ಲದ ಹಿಡದಾರ)

**ಹೈದರಾಬಾದ ವಕೀಲರ ಜಾಗೃತಿ ಸಮಿತಿಯ ವರದಿ: ದಿ:17/5/1948**

ಗೋರ್ಟಾ ಹತ್ಯಾಕಾಂಡದ ನಂತರ ಆ ಘಟನೆಯನ್ನು ವಿಕ್ಷಿಸಿ ವರದಿಯನ್ನು ತಿಳಿದುಕೊಳ್ಳಲು ಘಟನೆ ನಡೆದ ಒಂದು ವಾರದಲ್ಲಿಯೇ ದಿನಾಂಕ 17/05/1948ಕ್ಕೆ ಶ್ರೀ.ಕೆ.ಎಂ ಮುನ್ಸಿಯವರ ನೇತೃತ್ವದಲ್ಲಿ ಹೈದ್ರಾಬಾದ ವಕೀಲರ ಒಂದು ಜಾಗೃತ ಸಮಿತಿಯನ್ನು ಕರೆದುಕೊಂಡು ಗೋರ್ಟಾ ಗ್ರಾಮದೆಲ್ಲಿ ಬಂದರು ಗೋರ್ಟಾ ಘಟನೆಯ ಕುರಿತು ಯಾರು ಏನೇ ಹೇಳಿದರು ಅದರಲ್ಲಿ ಅತಿಶಯಕ್ತಿ ಇದೆ ಎಂಬ ಅನುಮಾನಕ್ಕೆ ಆಸ್ಪದ ಇರುವ ಸಾಧ್ಯತೆ ಇರುತ್ತದೆ. ಯಾಕೆಂದರೆ ಯಾವ ಮನುಷ್ಯನು ಇಂಥ ಒಂದು ಘಟನೆ ನಡೆದಿರಬಹ್ಮದೆಂದು ಉಹಿಸಲೂ ಕೂಡ ಸಾಧ್ಯತೆ ವಿಲ್ಲದಂತಾಗಿದೆ, ಆದರೆ ಈ ಹತ್ಯಾಕಾಂಡ ನಡೆದ ಒಂದೇ ವಾರದಲ್ಲಿ ಶ್ರೀ.ಕೆ.ಎಂ. ಮುನ್ಸಿಯವರು ದಾಖಲಿಸಿರುವಂತಹ ವರದಿಯನ್ನು ಈ ಕೆಳಗಿನಂತೆ ಉಲ್ಲೇಖಿಸಲಾಗಿದೆ.

ವಿಧಾನ ಪರಿಷತ್ತಿನ ಒಬ್ಬ ಸದಸ್ಯರನ್ನು ಒಳಗೊಂಡಂತೆ ವಕೀಲರ ಜಾಗೃತಿ ಸಮಿತಿಯು ಇಲ್ಲಿಯ ಅನೇಕ ನತದೃಷ್ಟ ಹಳ್ಳಿಗಳಿಗೆ ಭೇಟಿ ನೀಡಿ ವರದಿ ಮಾಡಿತು.ನಾವು 17ಮೇ 1948ರಂದು ಮುಂಜಾನೆ 11ಗಂಟೆಗೆ ಗೋರ್ಟಾಕ್ಕೆ ಬಂದೆವು, ಅದೊಂದು ಭಯಾನಕವು ಹೃದಯವಿದ್ಯವಕವು ಅದಂಥ ದೃಶ್ಯವಾಗಿತ್ತು. ಒಬ್ಬ ಗಾಯಗೊಂಡ ಮನುಷ್ಯ ಹಾಗೂ ಇಬ್ಬರು ಮುದುಕಿಯರ ಹೊರತು ಊರಲ್ಲಿ ಯಾರು ಇರಲಿಲ್ಲ ನೂರಾರು ದನಗಳ ಮೇವು ನೀರಿಲ್ಲದೆ ಕೊನೆ ಊಸಿರು ಎಳೆಯುತ್ತಿದ್ದವು. ಹಳ್ಳಿಯ ತುಂಬೆಲ್ಲ ಸತ್ತು ಕೊಳೆತ ದನಗಳು ಮನುಷ್ಯರ ಆಸ್ತಿಪಂಜರಗಳು ಮೂಳೆಗಳು ಅರೆಬರೆ ಸುಟ್ಟ ಹೆಣಗಳು ಚದುರಿ ಹೊಗಿದ್ದರು. ಅಲ್ಲಿ ಉಸಿರಾಡಲು ಆಗದಂತಹ ದುರ್ಗಂಧ ತುಂಬಿತ್ತು.

ಕರೀಮಾಬಾದದ ಶ್ರೀ ಅಬ್ದುಲ ಸಮೀದ ಖಾನ ಎಂಬ ಸಬ್ ಇನ್ಸಪೆಕ್ಟರ್ ಆರು ಜನ ಪೇದೆಗಳೊಂದಿಗೆ ಲಕ್ಷ್ಮಿಗುಡಿಯಲ್ಲಿದ್ದರು. 2500 ಜನಂಶಖ್ಯೆಯ 400 ಮನೆಗಳ ಹಳ್ಳಿ ಅದಾಗಿತ್ತು ಸರಕರಿ ಗೋದಾಮು, ದಲಿತರ ಮತ್ತು ಮುಸ್ಲಿಮರ ಮನೆಗಳನ್ನು ಬಿಟ್ಟು ಉಳಿದ ಎಲ್ಲ ಮನೆಗಳನ್ನು ನಾಶಗೊಳಸಿಲಾಗಿತ್ತು. ನಾವು ಆ ಹಳ್ಳಿಗೆ ಭೇಟಿ ಕೊಡುವವರೆಗೆ ಇನ್ನು ಅಲ್ಲಿಯ ಮನುಷ್ಯರ ಮುಳೆಗಳ ಕುರಿತಾಗಲಿ ಹೆಣಗಳ ಕುರಿತಾಗಲಿ ನಾಶವಾದ

ಮನೆಗಳ ಕುರಿತಾಗಲಿ ನಷ್ಟದ ಬಗ್ಗೆ ಆಗಲಿ ಪೋಲಿಸ್ ಪಂಚನಾಮೆ ಆಗಿರಲಿಲ್ಲ ಪಂಚನಾಮೆ ತಯಾರಿಸಲು ಯಾವ ಪಂಚರು ಲಭ್ಯವಿಲ್ಲ ಮತ್ತು ಮುಳೆಗಳನ್ನು ಹಾಗು ಸುಟ್ಟ ಹೆಣಗಳನ್ನು ಗುರುತಿಸುವದು ತನ್ನಿಂದ ಸಾಧ್ಯವಿಲ್ಲವಾಗಿದೆ ಎಂದು ಸಬ ಇನ್ಸಪೆಕ್ಟರ್ ತಿಳಿಸಿದನು.

ಅಷ್ಟೋತ್ತಿಗೆ ಪಕ್ಕದ ಹಳ್ಳಿಯಲ್ಲಿ ಆಶ್ರಯ ಪಡೆದಿದ್ದ ಗೋರ್ಟಾ ಗ್ರಾಮದ ಒಬ್ಬ ಮನುಷ್ಯನ್ನು ತನ್ನ ದನವನ್ನು ಹುಡುಕಿಕೊಂಡು ಬಂದನು ಆತ ಭಯ ಭೀತನಾಗಿದ್ದನು ಆತನಿಗೆ ಸ್ವಾಂತನ ಹೇಳಿ ಘಟನೆ ಬಗ್ಗೆ ವಿಚಾರಸಿದೆವು ಆತ ಹೇಳಿದ 200ಕ್ಕು ಹೆಚ್ಚು ಜನರನ್ನು ನಿರ್ದಯವಾಗಿ ಕೊಲ್ಲಲಾಯಿತು. ಕೊಂದವರನ್ನು ಬೆರಣಿಗಳ ರಾಶಿಯಲ್ಲಿ (ಕುಳಬಾನದಲ್ಲಿ) ಕಣಕಿಯ ಭಣವೆಗಳಲ್ಲಿ ಹಾಕಿ ಸುಡಲಾಯಿತು.

ಹೆಣಗಳನ್ನು ಗುಡ್ಡೆ ಹಾಕಿ ಸುಟ್ಟ ಸ್ಥಳವನ್ನು ಆತ ತೊರಿಸಿದನು ಹೆಣಗಳನ್ನು ಗುಡ್ಡೆ ಹಾಕಿದ ಮನೆಯ ಒಳಗೆ ನಾವು ಹೋದೆವು ಮನುಷ್ಯರ ತಲೆ ಬುರಡೆಗಳು ಮುಳೆಗಳು ಎಲ್ಲೆಂದರಲ್ಲಿ ಹರಡಿ ಕೊಂಡಿದ್ದವು. ಅಲ್ಲಿ ನಮ್ಮೆದುರಿಗೆ ಪಂಚನಾಮೆ ಮಾಡಿಕೊಳ್ಳಲಾಯಿತು.ಆಮೇಲೆ ನಾವು ನಾರಾಯಣರಾವ ಮುಕ್ತೆದಾರ ಹೊಲಕ್ಕೆ ಹೋದೆವು ಹೆಣಗಳನ್ನು ಸುಟ್ಟ ಬಣವೆಗಳನ್ನು ನೋಡಿದೆವು ಚೆನ್ನಪ್ಪ ಎನ್ನುವರ ಹೊಲದ ಎಂಡು ಬಣಿವೆಗಳಲ್ಲಿಯು ಹೆಣಗಳನ್ನು ಸುಟ್ಟಿದ್ದನ್ನು ತಲೆ ಬುರಡೆ ಮುಳೆಗಳನ್ನು ಕಂಡೆವು.

ಅದನ್ನೆಲ್ಲ ನೋಡಿ 200ಕ್ಕು ಹೆಚ್ಚು ಜನರನ್ನು ಕೊಂದಿದ್ದು ಸ್ಪಷ್ಟವಾಯಿತು. ಆಕ್ರಮಣಕಾರಿಗಳು ಮುಸ್ಲಿಮರು ದಲಿತರಿದ್ದರೆಂದು ಒಬ್ಬ ಸಾಕ್ಷಿದಾರನು ಹೇಳಿದನು ಅವರು ಗೌಡಗಾಂವ ಬೋರಳ ಕನಕಟ್ಟಾ ಘೋಡವಾಡಿ ಚಿಂಚಲಿ ಮುಂತಾದ ಹಳ್ಳಯವರಾಗಿದ್ದರೆಂದು ಆತ ತಿಳಿಸಿದ ಇನ್ನೊಬ್ಬ ಸಾಕ್ಷಿ ಪ್ರಕಾರ ಆಕ್ರಮಣಕಾರಿಗಳ ಸಂಖ್ಯೆ 500ರಷ್ಟು ಇತ್ತು. ಅನೇಕರನ್ನು ಆತ ಗುರುತ್ತಿಸುತ್ತಾನೆ ಖೂದರತುಲ್ಲಾ ಎಂಬ ಕಾನ್ಸಟೇಬಲ್ ಬಿಲ್ಲೆ ಸಂಖ್ಯೆ 38 ಆ ಗುಂಪಿನಲ್ಲಿದ್ದನ್ನು ಎರಡು ದಿನಗಳ ವರೆಗೆ ಹಳ್ಳಿಯ ಜನರು ಅವರನ್ನು ಎದುರಿಸಿದರು. ಕೊನೆಗೆ ಜೀವ ಭಯದಿಂದ ಒಡಿಹೋದರು ಕೋಟೆಯಂತಿದ್ದ ಮಹಾದಪ್ಪ ಎನ್ನುವವರ ಮನೆಯನ್ನು ನಾಶ ಗೊಳಿಸಿದರು. ಎಲ್ಲಾ ಮನೆಗಳನ್ನು ಸುಟ್ಟು ಹಾಕಿದರು ಸರಕಾರಿ ಗೋದಾಮು ಗಳನ್ನು ಮುಸ್ಲಿಮರ ಮತ್ತು ದಲಿತರ ಮನೆಗಳನ್ನು ಅವರು ಮುಟ್ಟದೆ ಇರುವದನ್ನು ಕಂಡು ನಮಗೆ ಆಶ್ಚರ್ಯವಾಯಿತು.

ಪಕ್ಕದ ಹಳ್ಳಿಯಲ್ಲಿ ಆಶ್ರಯ ಪಡೆದಿದ್ದ ಇಬ್ಬರು ಕುರಿ ಕಾಯುವವರು ಅಲ್ಲಿಗೆ ಬಂದರು ಸಾಕ್ಷಿಗಳು ನಮಗೆ ಕೊಟ್ಟ ಮಾಹಿತಿಯನ್ನು ಅವರು ದೃಡಿಕರಿಸಿದರು ನಾವು ಅಲ್ಲಿ ನಾಶಗೊಂಡ ಮನೆಗಳ ಮುಳೆಗಳ ಫೋಟು ತೆಗೆದುಕೊಂಡೆವು ಗಾಯಗೊಂಡವರಲ್ಲಿ ಮತ್ತು ಹತರಾದವರಲ್ಲಿ ಹೆಚ್ಚಿನವರು ಲಿಂಗಾಯತರೆ ಆಗಿದ್ದರು.

Hyderabad Lawyers vigilance committee report 17.5.1948

Latter, the Lawyers vigilance committee including a member of the legislative council visited several of these unfortunate villages and made their Report. A lurid picture was given by the vigilance committee of the Villlage of Gorta which was destroyed on may 10 as a part of the campaign which began in February.

After Chincholi we reached Gorta on the 17th of May 1948 At 11:00 AM Gorta Presented on awful and hurt rending sight. Nobody was their except on wounded person and three aged women. The whole village and its surroundings even from a far were stinking awfully. 100 of cattle were breathing there last for want of water and fodder. Allround the village the dead bodies, of animals were seen lying in a decomposed state. Heaps of human skeletons of bones and half, burnt dead bodies were seen line even at the time of our visit in different places in the whole village. Even in the very village the bad odour is unbearable.

The village in competely desolated. The houses and the locations have been entirely ruined. Mr. Abdul Hamid Khan, Sub inspector, of Karimabad, aliong with six constable, is staying in the Luxmi Temple.

There (had been) many wealthy Hindu inhabitants in the village before this incident, there were 400 houses in the village with a population of 2500. But now, except the Government godown and the houses belonging to the community of the depressed classes and dthe Muslims, the rest been gutted. The loss is estimated at Rs.70 lakhs.

Till our visit to the village, no panchanama had been prepared by the police either of the human bones or the dead bodies or the gutted houses, (or) that of the loss. The said sub-Inspector stated that no panch was available for preparing the panchanama, and that he was unable to identify the bones and the dead bodies burnt.

Mean while a resident of the village who had taken shetler I the adjoining village, came there in search of his cattle. (he) appeared to be utterly frightened. In the absence of the Sub-Inspector we consoled him and on enquiry he started weeping, and said: More than 200 persons have been mercilessly murdered and the dead bodies have been burnt I cow-dung cakes and heaps of fodder, He pointed out where the dead bodies (had been) heaped together and burnt.

We stepped into the house, along with the Sub-Inspector, where the dead bodies had been gathered together an burnt. Human skulls and bones were found everywhere. Their Panchanama was prepared in our presence. After (that) we and the Sub-Inspector proceeded to the field of Mr. Narayan Rao Moktedar, where heaps of Kadbi wre lying. Many dead bodies (had been been) gathered an burnt in the heaps. Here also human bones and te remains of the dead bodies were found,

half burnt. Moreover, there were two heaps of kadbi in the field of one channappa in which dead bodies (had been) burnt. Human skulls nad bones were found there.

It is evident from the inspection of these places that over 200 persons (had been) murdereed. After the preparation of (the) Panchanama the Sub-Inspector collected the bones and sent them for medical examinations. One witness said that the raiders were Muslims and Dheds. They belongaed to different villages. Most of them belonged to the villages Godgaon, Boral, Kankat, Borwadi, Kamla Chincholi and Pancnal.

Another witness said that the raiders numbered 500 and (he) knew many of them. One constable names Qudrat Ullah bearing badge No.38 (had been) present on the occason. He sated that the attack had taken placeon 10$^{th}$ May and 300 goondas took part in the raid, and the villages resisted for two days,but due to constant and serious attack, they had to run for their lives. The house of Mhadappa, which was more or less a fort, was gutted completely.all the other houses were also fully burnt.But we are surprised that the Government godowns and the houses belongingto Muslims and the depressed classes were left untouched.

Meanwhile two shepheds, who had taken shelter in the adjoining village, happened to come over there. Both of them corroborated the statement of the witness. We have taken many snapshots of the gutted houses and the bones. Most of the wounded and the murdered belonged to the Lingayat community.[8]

(The End of An Era)

## ರಜಾಕಾರರ ಹಾವಳಿಯಲ್ಲಿ ಆಶ್ರಯವಾದ ಡುಮಣೆ ಮನೆ

1948ರಂದು ಮೇ9 ಬೆಳಗ್ಗೆ 08:00ಗಂಟೆಗೆ ಯಾಗುತಿದ್ದಂತೆ ಸೂಮರು 1000ಜನರು ರಜಾಕಾರರಿಂದ ಗೋರ್ಟಾದ ಮೇಲೆ ದಾಳಿ ಮಾಡಿದರು. ಗೋರ್ಟಾ (ಬಿ) ಗ್ರಾಮವು ಬೀದರ ಜಿಲ್ಲೆಯ ಬಸವಕಲ್ಯಾಣ ತಾಲೂಕಿನಲ್ಲಿದೆ ರಜಕಾರರ ಹಾವಳಿಯ ಪೂರ್ವದಲ್ಲಿ ಊರಿನ ಹಿಂದೂಗಳು ಭಧ್ರಕೋಟೆಯದ್ದಿಂತ ಡುಮಣೆ ಅವರ ಮನೆಯನ್ನು ಸೇರಿಕೊಂಡರು ಈ ಮನೆಯು ಡುಮಣೆ ಸಾಹುಕಾರರ ಮನೆಯಂದು ಕರೆಯಿಸುಕೊಂಡಿದ್ದು. ಈ ಮನೆಯು ಕರಿಕಲ್ಲಿನಿಂದ ಕಟ್ಟಲ್ಲಟ್ಟ ಸುಂದರವಾದ ಸೌದ. ಗೋರ್ಟಾ ಗ್ರಾಮದ ಮಧ್ಯಭಾಗದಲ್ಲಿರಿವ ಈ ಮನೆ ಎತ್ತರ ಸ್ಥಾನದಲ್ಲಿದ್ದು ಅದರ  ಮಹಡಿಯ ಮೇಲಿನಿಂದ ಇಡಿ ಊರನ್ನೆ ನೋಡಬಹುದಾಗಿತ್ತು. ಇಡಿ ಗ್ರಾಮದಲ್ಲಿ ಪ್ರಗತಿ ಪರ ಕೃಷಿಕರಾಗಿದ್ದು ಡುಮಣೆ ಸಾಹುಕಾರ ಮನೆಯಲ್ಲಿ ಸೂಮಾರು 800ಜನ ಆಶ್ರಯ ಪಡೆದಿದ್ದರಂತೆ.

ಮಾದಪ್ಪ ಡುಮಣೆಯವರ ಕುಟುಂಬದವರು ಸದಸ್ಯರ ಅನೇಕರು ಸ್ವತಂತ್ರ್ಯ ಯೋಧರಾಗಿದ್ದು ಮಾದಪ್ಪ ಅವರ ಮಗ ಚೆನ್ನಬಸಪ್ಪ ಡುಮಣೆ ಅವರು ಆದರ್ಶ ದೇಶಭಕ್ತರಾಗಿ ಅವರು ಕೂಡಾ ರಜಾಕಾರರ ವಿರುದ್ದ ಹೋರಾಡುವ ಯೋಧರಿಗೆ ಶಸ್ತ್ರಾಸ್ತ್ರಗಳನ್ನು ಪೂರೈಸುವ ಕಾರ್ಯ ಮಾಡುತ್ತಿದ್ದರು. ಮೈಂದರ್ಗಿ ಗೌಡಗಾಂವ ನಿಂಗದಳ್ಳಿ ಮುಂತಾದ ಶಿಬಿರಗಳಿದ್ದ ನೀರಾಶ್ರೀತರಿಗೆ ಊಟ ವಸತಿಯ ಸೌಲಭ್ಯ ಕಲ್ಪಿಸಿಕೊಟ್ಟು ಉದಾರವಾದ ಆರ್ಥಿಕ ಸಹಾಯದಿಂದ ಸ್ವತಂತ್ರ್ಯ ಯೋಧರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದರು. ಆರ್ಯ ಸಮಾಜದ ಸ್ವತಂತ್ರ್ಯ ಹೋರಾಟಗಾರರು ಗೋರ್ಟಾಕ್ಕೆ ಬಂದರೆ ಅವರಿಗೆ ಮಾದಪ್ಪ ಡುಮಣೆ ಉಟ ವಸತಿಯ ವ್ಯವಸ್ಥೆ ಮಾಡುತ್ತಿದ್ದರು. ಗೋರ್ಟಾದ ಗ್ರಾಮದ ಮೇಲೆ ರಜಾಕಾರರ ಆಕ್ರಮಣ ಮಾಡಿದ ಮೇಲೆ ನೂರಾರು ಜನರು ಡುಮಣೆ ಅವರ ಮನೆಯಲ್ಲಿ ಇದ್ದು ಮನೆ ಮಳಿಗೆಯ ಮೇಲಿಯಿಂದ ಸಬಲ ಹಿಂದೂ ಯುವಜನತೆ ಕವಣೆಯಿಂದ ರಜಾಕಾರರ ಮೇಲೆ ಕಲ್ಲುಬಿಸಿದರೆ ಮತ್ತೆ ಕೆಲವರು ಬಂದೂಕಿನಿಂದ ರಜಾಕಾರರ ಮೇಲೆ ಗುಂಡು ಹಾರಿಸಿದರು ಆದರೆ ಬಂದೂಕುಗಳು ಹಳೆ ಕಾಲದ್ದಾಗಿದ್ದು ಒಮ್ಮೆ ಗುಂಡು ಹಾರಿಸಿದ ಮೇಲೆ ಅದಕ್ಕೆ ಮದ್ದು ಗುಂಡು ತುಂಬಬೇಕಾಗಿತ್ತು. ಇದರಿಂಥ ಅಪಾರ ಸಮಯ ನಷ್ಟವಾಗಿ ರಜಾಕಾರರನ್ನು ಎದುರಿಸುವಲ್ಲಿ ಅನೇಕ ತೊಂದರೆಗಳನ್ನು ಎದುರಿಸಬೇಕಾಯಿತು. ಆದರೆ ಗೋರ್ಟಾದ

ಜನತೆ ಧೈರ್ಯ ಸಾಹಸ ಹಾಗು ಹೋರಾಡುವ ಕೆಚ್ಚು ಇದ್ದರು ಕೂಡಾ ಆದುನಿಕ ಆಯುಧಗಳ ಕೊರತೆಯನ್ನು ಕಾಣಬಹುದು. ರಜಾಕಾರರ ಹತ್ತಿರ ಬಂದೂಕು ಬಾಂಬಗಳು ಇತರೆ ಆಯುಧಗಳು ಇದ್ದರೆ ಹಿಂದೂಗಳಲ್ಲಿ ಕತ್ತಿ ಬರ್ಚಿ ಗಳಿಂದಲೆ ಹೋರಾಡಬೇಕಾಗಿತ್ತು. ಆಗ ಊರಿನ ಮುಂಬಾಗದಲ್ಲಿ ಚಿಕ್ಕದಾದ ಲಕ್ಷ್ಮಿಗುಡಿ ಇದ್ದು ಅಲ್ಲಿ ಮನೆ ಮನೆಗಳಿಂದ ಸ್ತ್ರೀಯರು ಮಕ್ಕಳು ಮುದುಕರು ಎನ್ನದೆ ಎಳೆದುಕೊಂಡು ಬಂದು ರಜಾಕಾರರು ಅಮಾನುಷವಾಗಿ ಹತ್ತೆ ಮಾಡುತ್ತಿದ್ದರು. ಕತ್ತಿ ರುಂಡವನ್ನು ಬೇರ್ಪಡಿಸಿ ಕೊಲೆ ಮಾಡುವದನ್ನು ಕಂಡು ಅಮಾಯಕರು ರೋಧಿಸುತ್ತ ನಿಂತಾಗ ರಜಾಕಾರರು ಅಟ್ಟಹಾಸದಿಂದ ನಗುತ್ತಾ ತಮಾಷೆಯನ್ನು ನೋಡುತ್ತಿದ್ದರು. ಮತ್ತು ಕಾಲುವೆ ಮುಲಕ ಹರಿಯುವ ರಕ್ತವನ್ನು ಕಂಡು ಗಹಗಹಿಸಿ ನಗುತ್ತಿದ್ದರು.ಈ ರಿತಿಯಾಗಿ ಶವಗಳು ದೇಹದಿಂದ ಬೇರ್ಪಟ್ಟ ರುಂಡಗಳು ಕೈ ಕಾಲುಗಳು ಹೊಟ್ಟೆಯಿಂದ ಹೊರಬಿದ್ದ ಕರಳುಗಳು ಮತ್ತು ಭೆಂಕಿಯಲ್ಲಿ ಸುಟ್ಟು ಕರಕಲಾದ ಶವಗಳನ್ನು ಕಂಡು ಜನರು ಅದೊಂದು ಬೀಭತ್ಸ ದೃಶ್ಯವಾಗಿತ್ತೆಂದು ಅದನ್ನು ಸ್ಮರಿಸಿಕೋಳ್ಳುವದು ಬೇಡ ಎಂದು ಹೇಳಿದರು. ಅದೇ ರಿತಿ ಜಾನುವಾರುಗಳು ಕೂಡಾ ನೀರು ಮೇವು ಇಲ್ಲದೆ ಸತ್ತು ಹೋಗುತ್ತಿದ್ದವು ಅನೇಕ ಮನೆಗಳಲ್ಲಿ ಭೆಂಕಿ ಹಚ್ಚಿದ್ದರಿಂದ ಹಿಂದೂಗಳು  ಅಪಾರ ನಷ್ಟಗಳನ್ನು ಅನುಭವಿಸಬೇಕಾಯಿತು. ಊರಿನ ಅನೇಕ ಜನ ಸೋಲಾಪುರ, ಅಕ್ಕಲಕೋಟ ಮತ್ತು ಬೀಜಾಪೂರಕ್ಕೆ ಶರಣಾರ್ತಿಗಳಾಗಿ ಹೋಗಿ ಅಲ್ಲಿ ಆಶ್ರಯ ಪಡೆದರು ಕೆಲವರು ಪಕ್ಕದ ಹಳ್ಳಿಗಳಿಗೆ ಹೋಗಿ ತಮ್ಮ ಜೀವ ರಕ್ಷಸಿಕೊಂಡರು ಅನೇಕ ಸ್ತ್ರೀಯರ ಮೇಲೆ ರಜಾಕಾರರ ಅತ್ಯಚಾರ ಮಾಡಿ ಅವರನ್ನು ಕೊಲೆ ಮಾಡಿದರು. ಗ್ರಾಮದಲ್ಲಿ ಆದ ರಜಾಕಾರರ ಅತ್ಯಚಾರಗಳನ್ನು ವಿವರಿಸಿದ್ದ ಮುರಳಿಧರಾವ ಕುಲಕರ್ಣಿ ಎಂಬುವರು ಕೆಲವು ಮನೆಗಳನ್ನು ತೋರಿಸುತ್ತ ಯಾವುದೆ ಮನೆಗಳ ಮೇಲೆ ರಜಾಕಾರರು ದಾಳಿ ಮಾಡದೆ ಬಿಟ್ಟಿಲ್ಲ ಮತ್ತು ಸ್ತ್ರೀಯರ ಮೇಲೆ ಅತ್ಯಚಾರ ಮಾಡಿದರೆಂದು ವಿವರಿಸಿದರು. ಕಾಶಪ್ಪಾ ಭಾಲ್ಕೆ , ನಾಗಪ್ಪ ಹೊಳೆಂಬರ, ಮಹಾರುದ್ರಪ್ಪ ಪಟ್ನೆ ಸಿದ್ರಮಪ್ಪಾ ಪಟ್ನೆ, ರಾಮಣ್ಣಾ ಕಬ್ಬಲಿಗ, ಮುಂತಾದವರು ರಜಾಕಾರೊಂದಿಗೆ ಹೋರಾಡಿದರು ಅವರು ರಜಾಕಾರರನ್ನು ಹಿಮ್ಮೆಟ್ಟಿಸುವದು ಸಾಧ್ಯವಾಗಲಿಲ್ಲ ರಾತ್ರಿಯಾದ ಮೇಲೆ ಊರಿನ ಜನರೆಲ್ಲರು ಕತ್ತಲಲ್ಲೆ ರಜಾಕಾರರ ಕಣ್ಣು ತಪ್ಪಿಸಿ ಪರಾರಿಯಾದರಂತೆ.

ಮರುದಿನ ರಜಾಕಾರರು ಮಾದಪ್ಪ ಡುಮಣೆ ಅವರ ಮನೆ ನುಗ್ಗಿ ಲೂಟಿ ಮಾಡಿ ಅಪಾರ ಭಂಗಾರ ಹುತಿಟ್ಟರಬಹುದೆಂದು ಅಲ್ಲಲ್ಲಿ ಅಗೆದು ಸಿಕ್ಕದನ್ನು ದೋಚ ತೊಡಗಿದರು ಮನೆಗೆ ಊರಿ ಹಚ್ಚಿ ಅದನ್ನು ಸಂಪೂರ್ಣ ನಾಶ ಮಾಡಬೇಕೆಂದಿದ್ದ ರಜಾಕಾರರು ಎಷ್ಟೆ ಪ್ರಯತ್ನಸಿದರು ಕೋಟೆ ಎಂತಿರುವ ಆ ಸೌಧಕ್ಕೆ ಹಾನಿ ಮಾಡುವದು ಆಗಲಿಲ್ಲ ಆದರು ಕೂಡಾ ಕರಿ ಹಾಸು ಕಲ್ಲಗಳು

ಭೆಂಕಿಯ ಶಾಖಕ್ಕೆ ಶೀಳಿ ಹೋಗಿವೆ. ಮನೆಯ ಎರಡನೆಯ ಅಂತಸ್ತಿನ ಕಟ್ಟಿಗೆ ಛಾವಣಿ ಸುಟ್ಟು ಹೋಗಿದರು ಗೋಡೆಗಳು ಭದ್ರವಾಗಿವೆ. ರಜಾಕಾರರ ದೌರ್ಜನ್ಯ ಮತ್ತು ಅಮಾನುಷ್ಯ ಕ್ರತ್ಯಗಳ ಬಗ್ಗೆ ಈ ಮನೆ ಅನೇಕ ಶತಮಾನಗಳ ವರೆಗೆ ಇತಿಹಾಸಕರರಿಗೆ ಸಾಕ್ಷಿಯನ್ನು ಕೊಡಬಲ್ಲದು.

ಮಾದಪ್ಪ ಡುಮಣೆ ಸಾಹುಕಾರರ ಶಿವಕುಮಾರ ಡುಮಣಿಯವರು ಮನೆಯ ಮೇಲಾದ ದಾಳಿಯ ವಿವಿರವನ್ನು ಕೊಡುತ್ತ ಮನೆಯ ಸುಟ್ಟು ಹೋದ ಭಾಗಗಳನ್ನು ತೊರಿಸಿದಾಗ ನಮಗೆ ಭಹಳ ವೇದನೆಯಾಯಿತು. ಈ ಮನೆ ಎಂತಹ ಘೋರ ಅತ್ಯಚಾರವನ್ನು ಸಹಿಸಕೊಂಡರು 800ಜನರನ್ನು ತನ್ನ ಒಡಲಲ್ಲಿ ಇಟ್ಟುಕೊಂಡು ಅವರ ಜೀವ ಉಳಿಸಿದೆ ಎಂದು ತಿಳಿದಾಗ ಭಹಳ ಗೌರವಾದಾರಗಳಿಂದ ಭವ್ಯ ಕಟ್ಟಡದತ್ತ ಮತ್ತೆ ಮತ್ತೆ ನೋಡಿದರು ಡುಮಣೆ ಸಾಹುಕಾರರ ಮೇಲೆ ಕಲ್ಲು ಮಣ್ಣು ಕಟ್ಟಿಗೆಗಳಿಂದ ಕಟ್ಟಿದ ಸೌಧವಾಗಿರದೆ ಜನರಿಗೆ ಸ್ಫೂರ್ತಿ ಕೊಡುವ ಮತ್ತು ಅಕ್ರಮಣ ಕಾರಕ ದುಷ್ಕೃತ್ಯಗಳನ್ನು ಸ್ಮರಣೆಗೆ ತಂದು ಕೊಡುವ ಭವ್ಯ ಸ್ಮಾರಕವಾಗಿದೆ ಎಂದು ಹೇಳಬಹುದು.

ಹ್ಯದ್ರಾಬಾದಿನ ಮಧ್ಯಬಾಗದಲ್ಲಿ ಹರಿಯುವ ಮೌಸಾ ನದಿಯ ದಡದಲ್ಲಿ ಒಂದು ಪುರಾತನ ವೃಕ್ಷವಿದೆ 19ನೇಯ ಶತಮಾನದ ಮೊದಲ ದಶಕದಲ್ಲಿ ಮೌಸಾ ನದಿಗೆ ದೊಡ್ಡ ಪ್ರವಾಹ ಬಂತು ಅನೇಕ ಮನೆಗಳು ಪ್ರವಾಹದಲ್ಲಿ ಕೊಚ್ಚಿ ಹೋದವು ಎಂದು ಹೇಳಲಾಗಿದೆ ಆದರೆ ನೂರಾರು ಜನರು ಆ ವೃಕ್ಷವನ್ನು ಏರಿ ತಮ್ಮ ಪ್ರಾಣ ರಕ್ಷಿಸಿಕೊಂಡರು ಎಂದು ಹೇಳುವ ಒಂದು ಫಲಕ ಹಾಕಲಾಗಿದೆ ಅದರಂತೆ ಡುಮಣಿ ಸಾಹುಕಾರರ ಮನೆಯೆ ಮುಂದೆ ಈ ಭವ್ಯಸೌಧ ದಿನಾಂಕ 09.051948ರಂದು 800ಜನರು ಆಶ್ರಯ ಪಡೆದು ರಜಾಕಾರರನ್ನು ಎದುರಿಸಿದರು ಎಂಬ ಫಲಕವನ್ನು ಹಾಕಬೇಡವೆ ? ಗೊರ್ಟಾ ಗ್ರಾಮಕ್ಕೆ ಬರುವ ಇಂದಿನ ಮತ್ತು ಮುಂದಿನ ಪಿಳಿಗೆ ಜನರು ಈ ಐತಿಹಾಸಿಕ ಸ್ಫೂರ್ತಿ ಪಡೆಯಬೇಕು ಪೋಲಿಸ್ ಕಾರ್ಯಚರಣೆ ನಂತರ ಮಾದಪ್ಪ ಡುಮಣೆ ಅವರು ಗೊರ್ಟಾ ಗ್ರಾಮದ ಪರಸ್ಥಿತಿಯನ್ನು ಕಂಡು ಬೆಚ್ಚು ಬಿದ್ದರು ಮುಂದೆ ಅವರು ಗೋರ್ಟಾ ಗ್ರಾಮದಲ್ಲಿ ಪುನರಜ್ಜಿವನವನ್ನು ಸಾಗಿಸುಕೊಂಡು ಕೃಷಿಯನ್ನು ಅವಲಂಬಿಸಿ ತನ್ನ ಕೆಲಸ ಕಾರ್ಯಕಾರ್ಯಗಳನ್ನು ಮುಂದುವರೆಸಿಕೊಂಡು ಬಂದರು ಹೀಗಾಗಿ ಡುಮಣೆ ಅವರ ಮನೆ ಹಲವಾರು ಜನರ ಜೀವ ಉಳಿಸಿದ ಪವಿತ್ರ ಕ್ಷೇತ್ರ ಎಂದು ಹೇಳಬಹುದು.

ಮಾದಪ್ಪ ಡುಮಣೆ ಅವರು ಗೋರ್ಟಕ್ಕೆ ಬಂದು ಹಿಂದೂ ಅಭಿಮಾನಿ ಮತ್ತು ಮಹಾಧಾನಿ ಎಂದು ಹೆಸರು ಪಡೆದ ಇವರು 1966ಡಿಸೆಂಬರ 27ರಂದು ಮರಣ ಹೊಂದಿದರು. ಇಂತಹ ವ್ಯಕ್ತಿಯನ್ನು ಗೋರ್ಟಾದ ಜನತೆ ತಮ್ಮ ಹೃದಯ ಸಿಂಹಾಸನದಲ್ಲಿ ಇಟ್ಟುಕೊಂಡು ಅವರನ್ನು ಸ್ಮರಿಸುತ್ತಾ ಅವರ

ನೆನಪಿನಲ್ಲಿಯೆ ಕಾಲ ಕಳೆಯುತ್ತಿದ್ದಾರೆ ಇಂತಹ ವ್ಯಕ್ತಿಯ ಮನೆಯನ್ನು ಸ್ಮಾರಕಭವನವನ್ನಾಗಿ ಮಾಡಬೇಕೆಂದು ತಮ್ಮ ನಿಲುವನ್ನು ಸರ್ಕಾರದ ಮುಂದೆ ಇಟ್ಟರು ಕೂಡಾ ಇನ್ನು ಆ ಕನಸು ಈಡೇರಿದಂತಾಗಿದೆ.

# ಅಧ್ಯಾಯ–6

## ಉಪಸಂಹಾರ

ಜಗತ್ತಿನಲ್ಲಿ ಭಾರತವು ಅಖಂಡತ್ತವನ್ನು ಹೊಂದಿದ ರಾಷ್ಟ್ರ. ಇದು ಪ್ರಪಂಚದಲ್ಲಿರುವ ಅನೇಕ ಸಂಸ್ಕೃತಿಗಳನ್ನು ಮೀರಿವಂತಹ ಹಾಗೂ ಸುಂದರ ಸಂಸ್ಕೃತಿಯನ್ನು ಹೊಂದಿದ ದೇಶವಾಗಿದೆ. ಅನೇಕ ಮಹಾನ್ ಮೇಧಾವಿಗಳಿಗೆ ಜನ್ಮಕೊಟ್ಟ ಈ ಭಾರತ ನಾಡು ಎಷ್ಟೋ ರಾಜಮನತೆಗಳನ್ನು ಕಂಡಿದಿಯೋ, ಅದನ್ನು ಅರಿಯುವದು ಕಷ್ಟ ಸಾಧ್ಯವಾಗಿದೆ. ಸ್ಥಳಿಯ ರಾಜಮನೆತನಗಳನ್ನು ಕಂಡಿದಿಯೊ, ಅದನ್ನು ಅರಿಯುವದು ಕಷ್ಟಸಾಧ್ಯವಾಗಿದೆ. ಸ್ಥಳಿಯ ರಾಜಮನೆತನಗಳನ್ನು ಕಂಡಂತೆ ಹೊರ ರಾಷ್ಟ್ರದವರ ಆಳ್ವಿಕೆಗೆ ಒಳಪಟ್ಟು ರಕ್ತದ ಹೊಳೆ ಹರಿಯಲು ಇವೆಲ್ಲವನ್ನು ಮರೆಯಲೆಂಬಂತೆ ತನ್ನ ಒಡಲ್ಲಿ ಅನೇಕ ಸುಂದರ ಗುಣಗಳನ್ನು ಹೊಂದಿದೆ.

ಸುಂದರ ಪರಿಸರ ಹಿಮಗಿರಿಗಳು ನದಿ–ಸರೋವರಗಳು, ಬೆಟ್ಟಗುಡ್ಡಗಳು, ಪ್ರಾಣಿ–ಪಕ್ಷಿಗಳು, ಸ್ವರ್ಗದ ಛಾಯೆ, ಹರಡಿದಂತಿದೆ,ಇತಹ ದೇಶ ಹುಟ್ಟಿದಂದಿನಿಂದಲೂ ಅನೇಕ ರಾಜಕೀಯ ತಿರುವುಗಳನ್ನು ಕಂಡು ಕೊನೆಗೆ ಬ್ರೀಟಿಷರ ಆಳ್ವಕೆಯಲ್ಲಿ ತತ್ತರಿಸಿ 15.08.1947ರಂದು ಅವರ ಬಲಿಷ್ಠ ಅಧಿಕಾರಶಾಹಿ ಸಂಕೋಲೆಗಳಿಂದ ಮುಕ್ತಿ ಕಂಡಿತು.

ಬ್ರೀಟಿಷರು ಭಾರತ ಭೂಮಿಗೆ ವ್ಯಾಪರ ಮಾಡುವ ಪ್ರಥಮ ಗುರಿಯನ್ನು ಇಟ್ಟು ಕೊಂಡು ರಾಣಿ ಎಲೆಜೆಬತಳಿಂದ ಒಪ್ಪಿಗೆ ಪಡೆದುಕೊಂಡು ಭಾರತಕ್ಕೆ ಬಂದು ಹಲವಾರು ವರ್ಷಗಳ ಕಾಲ ವ್ಯಪಾರವನ್ನು ಮಾಡುತ್ತಾ ದೇಶ ಸಂಪತ್ತಿನ ವ್ಯಾಮೋಹಕ್ಕೆ ಬಲಿಯಾಗಿ ಭಾರತಿಯರ ಅರಸರ ನಿರಂತರ ಘರ್ಷಣೆಗಳ ಉಪಯೋಗವನ್ನು ಪಡೆದುಕೊಂಡು ಪ್ರಬಲರಾದರು ಮುಂದೆ ಇಂತಹ ದೇಶ ದ್ರೋಹಿಗಳ ವಿರುದ್ಧ 1857ರಲ್ಲಿ ಪ್ರಥಮ ಬಾರಿಗೆ ಸ್ವತಂತ್ರ್ಯಕ್ಕಾಗಿ ಹೋರಾಟಕ್ಕಿಳಿದರು. ಆದರೆ ಬ್ರಿಟಿಷರ ಭೇದ ನೀತಿಯಿಂದ ಅದು ತಣ್ಣಗಾಯಿತು.ಆದರ ಭಾರತಿಯರ ಮನಸ್ಸಿನಲ್ಲಿ ಬೆಳೆದ ರಾಷ್ಟ್ರೀಯತೆಗೆ ಕೊನೆಯಿರಲಿಲ್ಲ ನಿರಂತರವಾಗಿ ಭಾರತಾಂಬೆಯ ಮಕ್ಕಳು ಬ್ರೀಟಿಷರಿಂದ ಮುಕ್ತಿಗಾಗಿ ಹವಣಿಸುತ್ತಿದ್ದರು ದೇಶದ್ಯಾಂತ ನಡೆಯುವ ಪ್ರತಿಯೋಂದು ಚಳುವಳಿಗೆ ಜನರ ಬೆಂಬಲ ಅಪಾರವಾಗಿ ದೊರಕಿತು ಇದಕ್ಕೆ ಬೀದರ ಜಿಲ್ಲೆಯ ಬಸವಕಲ್ಯಾಣ ತಾಲುಕಿನ ಸಣ್ಣ ಗ್ರಾಮವಾದ ಗೋರ್ಟಾ ಬಿ ಹೊರತಾಗಿರಲಿಲ್ಲ ಭಾರತದ ಇತರ ಕಡೆ ರಾಷ್ಟ್ರೀಯವಾದಿಗಳು ಕೇವಲ ಬ್ರೀಟಿಷರ ವಿರುದ್ದ ಹೋರಾಡಿದರೆ ಹೈದ್ರಾಬಾದ ಸಂಸ್ಥಾನದ ಅಡಿ ಜನತೆ ಪ್ರಮುಖವಾಗಿ ಎರಡು ಕಂಟಕಗಳ ಜೊತೆ

ಹೋರಾಡ ಬೇಕಾಗಿತ್ತು. ಒಂದು ಬ್ರೀಟಿಷರಿಂದ ಭಾರತಾಂಬೆಯ ಮುಕ್ತಿಗಾಗಿ ಇನ್ನೊಂದು ಹೈದ್ರಾಬಾದ ಕರ್ನಾಟಕವನ್ನು ನಿಜಾಂನಿಂದ ಮುಕ್ತಿ ಗೊಳಿಸುವ ಕೆಲಸ ವಿತ್ತು. ಈ ರೀತಿಯಾಗಿ ಗೋರ್ಟಾದ ಘಟನೆ ಬಸವಕಲ್ಯಾಣ ತಾಲೂಕಿನಲ್ಲಿ ನಡೆದ ಒಂದು ಅಹಿತಕರ ಘಟನೆಯಾಗಿದ್ದು,ಅದು ಜನರ ಸ್ಥಾನ ಮಾನಕ್ಕೆ ಧಕ್ಕೆ ತಂದಿದ್ದು ಸ್ವತಂತ್ರದ ಅಗ್ನಿ ಜ್ವಾಲೆಯಲ್ಲಿ ಬೆಂದು ಹುತಾತ್ಮರಾದ ಕನ್ನಡ ನಾಡಿನಲ್ಲಿ ಮಾತ್ರ ಗೋರ್ಟ(ಬಿ) ಗ್ರಾಮ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದ್ದು ಈ ಘಟನೆಯ ಚೇತರಿಕಯಿಂದ ಈ ಗ್ರಾಮ ಬೆಳವಣಿಗೆಯನ್ನು ಕಂಡು ಇತ್ತೀಚಿಗೆ ತನ್ನ ಅಸ್ತಿತ್ವವನ್ನು ಪಡೆದುಕೊಳ್ಳುತ್ತಿದೆ.

ಈ ರೀತಿಯಾಗಿ ಗೋರ್ಟಾದ ಘಟನೆ ಪೀಠಿಕೆ ಮತ್ತು ಭೌಗೋಳಿಕ ಲಕ್ಷಣಗಳು ಮತ್ತು ಪರಿಸರ ಹತ್ಯಾಕಾಂಡಕ್ಕೆ ರಾಷ್ಟ್ರೀಯತೆಯ ಪ್ರಭಾವ ಮತ್ತು ಗೋರ್ಟಾ ಹತ್ಯಾಕಾಂಡಕ್ಕೆ ಕಾರಣಗಳು ಮತ್ತು ಅದರಿಂದಾತಂಹ ಹಾನಿಗಳು ಮತ್ತು ಬುಲಾಯಿ ಹಾಡುಗಳು ಜನಪದ ಸಾಹಿತ್ಯ, ಐತಿಹಗಳು ಇನ್ನೀತರೆ ವಿಷಯಗಳನ್ನು ಒಳಗೊಂಡಿದ್ದು, ಮುಂದೆ ಈ ಘಟನೆಯಿಂದ ಗೋರ್ಟಾ ಗ್ರಾಮವು ತನ್ನದೇ ಆದಂತಹ ಅಸ್ತಿತ್ವವನ್ನು ಘಟನೆಯ ನೆನಪುಗಳಲ್ಲಿ ಅದನ್ನು ಸ್ಮರಿಸುತ್ತಾ ಸೆಪ್ಟಂಬರ 17ರಂದು ಗೋರ್ಟಾದ ಗ್ರಾಮದಲ್ಲಿ ಹೈದ್ರಾಬಾದ ಕರ್ನಾಟಕಾ ವಿಮೋಚನಾ ದಿನವನ್ನು ಹುತಾತ್ಮರ ನೆನಪಿಗೋಸ್ಕರ ಆಚರಿಸುತ್ತಾ ಬರುತ್ತಿದ್ದಾರೆ.

# ಆಧಾರ ಗ್ರಂಥಗಳು


1. ಡಾ॥ ಸೂರ್ಯನಾಥ ಕಾಮತ್, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಮೈಸೂರು 1974
2. ಡಾ॥ ಬಿ.ಸಿ.ಮಹಾಬಲೇಶ್ವರಪ್ಪ , ಹೈದರಾಬಾದ ಕರ್ನಾಟಕದ ರಾಜಕೀಯ ಚಳುವಳಿಗಳು, ಗು.ವಿ.ಗು 2008
3. ಬಸವರಾಜ ಪೋಲಿಸ್ ಪಾಟೀಲ , ಗುಲ್ಬರ್ಗಾ 2002
4. ವೈಜಿನಾಥ ಪಾಟೀಲ, ಹೈದರಾಬಾದ ಕರ್ನಾಟಕದ ಅಸಮಾನತೆಯ ಒಂದು ನೋಟ, ಗುಲ್ಬರ್ಗಾ 2005
5. ನಾರಾಯಣ ಕನ್ನಿಹಾಳ , ಹೈದರಾಬಾದ ವಿಮೋಚನೆ ಒಂದು ನೆನಪು ಗುಲ್ಬರ್ಗಾ 1991
6. ವೀರೇಂದ್ರ ಸಿಂಪಿ ನೆಲೋಗಿ, (ಸಂ) ಕವಿ ಕಾವ್ಯ ಪರಂಪರೆ, ಗುಲ್ಬರ್ಗಾ 2006
7. ಬಸವರಾಜ ಸಬರದ , ಬೀದರ ಜಿಲ್ಲಾ ದರ್ಶನ (ಸಂ) ಗು.ವಿ.ಗು.
8. ಬಾಲಚಂದ್ರ ಜಯಶೆಟ್ಟಿ ,ಹೈದ್ರಾಬಾದ ಕರ್ನಾಟಕ ವಿಮೋಚನಾ ಚಳುವಳಿ, ಬೆಂಗಳೂರ 2005
9. ಕಲ್ಯಾಣ ಜ್ಯೋತಿ ಸ್ಮರಣಸಂಚಿಕೆ, ಬಸವಕಲ್ಯಾಣ 2008
10. ಶ್ರೀ ವೀರುಪಾಕ್ಷಯ್ಯಾ ಶಿವಲಿಂಗಯ್ಯಾ ಮಠಪತಿ, ಹೈದ್ರಾಬಾದ ಕರ್ನಾಟಕದ ಜಲಿಯಾನ ವಾಲಾಬಾಗ್ ಗೋರಟಾ, ಗೋರಟಾ 2006
11. Depressed classes in Hyd Karnataka area under the Nizam Dominations.(1724-1948)
ಪ್ರಕಟಿತ ಪಿ.ಎಚ್.ಡಿ ಸಂಶೋಧನಾ ಪ್ರಬಂಧ, ಗುಲ್ಬರ್ಗಾ 2005
12. ಡಾ॥ ಕೆ.ವೆಂಕಟೇಶ, ಹೈದರಾಬಾದ ಕರ್ನಾಟಕದ ವರ್ತಮಾನದ ತಲ್ಲಣಗಳು(ಸಂ), ಬಳ್ಳಾರಿ 2006
13. ಜಗನ್ನಾಥರಾವ ಚಂಡ್ರಿಕಿ, ಅಭಿನಂದನ್ ಗ್ರಂಥ, (ಸಂ) ಡಾ॥ ಸ್ವಾಮಿರಾವ ಕುಲಕರ್ಣಿ, ಮತ್ತು ಪ್ರೊ.ರವೀಂದ್ರ ಕರ್ಜಗಿ, ಗುಲ್ಬರ್ಗಾ 2007
14. ಡಾ॥ ಬಿ.ಸರೋಜಾ, Hyderabad Karnataka Retrospect and prospect Ballary 2005
15. K.M.Munshi The end of an Era, Mumbai 1957
16. ಗೋಪಾಲರಾವ ಹೆಜೇಬ್ ಅಪ್ರೀಯ ಸತ್ಯ,ಗುಲ್ಬರ್ಗಾ
17. ವೀರೇಂದ್ರ ಪಾಟೀಲ, ಶ್ರೀಶೈಲ ನಾಗರಾಳ, ಗು.ವಿ.ಗು2005
18. ಗೋಪಾಲರಾವ ಹಜೇಬ್, ಹೈದ್ರಾಬಾದ ಮುಕ್ತಿ ಸಂಗ್ರಾಮ, ಗುಲ್ಬರ್ಗಾ.
19. ಬಸವರಾಜ ಟಿ.ಕುಮನೂರ, ಡಾ। ನಂಜುಂಡಪ್ಪಾ ವರದಿ ಮತ್ತು ಅನುಷ್ಠಾನ ಗುಲ್ಬರ್ಗಾ 2007
20. ಡಾ॥ ಎಸ್.ಚಂದ್ರಶೇಖರ , ಆಧುನಿಕ ಆಂದೋಲನಗಳು, ಬಿಳಿಗೆರೆ 2002.
21. ಡಾ॥ ಜಗನ್ನಾಥ ಹೆಬ್ಬಾಳೆ, ಬೀದರ ಜಿಲ್ಲಾ ದರ್ಶನ

# ಗೋರ್ಟಾ ಬಿ ಗ್ರಾಮದ ಸ್ವಾತಂತ್ರ್ಯ ಹೋರಾಟಗಾರರು



ಶ್ರೀ ಮಾದಪ್ಪ ಡುಮಣೆ



ಶ್ರೀ ವಿರೂಪಾಕ್ಷಯ್ಯಾ ಶಿವಲಿಂಗಯ್ಯಾ ಮಠಪತಿ



ಶ್ರೀ ಮಾರುತಿ ಪರೀಟ



ಶ್ರೀ ನಾಗಶೆಟ್ಟೆಪ್ಪಾ ಬಿರಾದಾರ



ಶ್ರೀ ಝುರನಾಥಪ್ಪಾ ರಾಜೇಶ್ವರೆ



ಶ್ರೀ ಮಹಾರುದ್ರಪ್ಪ ಡೊಣಗಾಪೂರೆ



ಮುಕ್ತಾಬಾಯಿ ಮಾಲಿ ಪಾಟೀಲ



ಗೋರ್ಟಾ ಬಿ ಗ್ರಾಮದ ಹೆಬ್ಬಾಗಿಲು



ಶ್ರೀ ಮಾದಪ್ಪ ಡುಮಣೆ ಅವರ ಮನೆ



ಶ್ರೀ ಲಕ್ಷ್ಮೀ ದೇವಸ್ಥಾನ ಗೋರ್ಟಾ ಬಿ



ರಜಾಕಾರರ ದಾಳಿಗೆ ತುತ್ತಾದ ಡುಮಣೆ ಮನೆ



ಶಾಸನ, ಗೋರ್ಟಾ



ನವಾಬ್ ಮೀರ್ ಉಸ್ಮಾನ್ ಅಲಿಖಾನ್ ಬಹಾದ್ದೂರ್ (೧೯೧೧–೧೯೪೮)

